ನಿತ್ಯಾನಂದ ಗ್ರಂಥಮಾಲೆ ಹೂ ೧.

# ಸುಳಿಗಾಳಿ



[ಹದಿನೈದು ವಿನೋದ ಚಿತ್ರಗಳ ಸಂಗ್ರಹ]

ಬರೆದವರು:—

ಮೈರಪ್ಪಾಡಿ ರಾಮಚಂದ್ರಯ್ಯ, ಪಣಂಬೂರು.



೧೯೩೬

ಮಂಗಳೂರು ಪ್ರೆಸ್, ರಥಬೀದಿ, ಮಂಗಳೂರು.

ಬೆಲೆ: ೦—೪—೦.

# ನನ್ನ ಮಾತು

ಹಲವು ದಿನಗಳಿಂದ, ಒಂದು ಪುಸ್ತಕವನ್ನು ಬರೆಯಬೇಕೆಂಬ ಆಶೆಯು ನನ್ನಲ್ಲಿ ಬಲವತ್ತರವಾಗಿತ್ತು. ವಿದ್ವಾಂಸರು ಮೆಚ್ಚಬಹುದಾದ ರೀತಿಯ ಪುಸ್ತಕವನ್ನು ಬರೆಯಲು, ಇದುತನಕ ಲೇಖನಿ ಹಿಡಿಯದ ನನ್ನಿಂದ ಸಾಧ್ಯವೇ? ಎಂಬ ಅಂಜಿಕೆಯೂ ಆ ಆಶೆಯೊಡನೆ ಬೆರೆತಿತ್ತು.

ಆದರೆ ಹೊಸದಾಗಿ ಮಾತುಕಲಿವ ಬಾಲಕನ ಯಾವ ತಪ್ಪು ನುಡಿಗಳಿಗೂ ತಾಯಿಯು ಬೇಸರಿಸದೆ, ಅಪ್ಪಿಮುದ್ದಿಡುವಂತೆ, ಕೇವಲ ಕನ್ನಡ ಭಾಷಾಸೇವೆ ಮಾಡಬೇಕೆಂಬ ಆತುರದಿಂದ ಬರೆದ ಈ ಪುಸ್ತಕದಲ್ಲಿ ಏನೊಂದು ತಪ್ಪುಗಳಿದ್ದರೂ ಪ್ರಾಜ್ಞರು ಕ್ಷಮಿಸಿ, ಇನ್ನು ಮುಂದೆ ಒಳ್ಳೆಯವುಗಳನ್ನು ಬರೆಯುವಂತೆ ನನ್ನನ್ನು ಪ್ರೋತ್ಸಾಹಿಸದಿರಲಾರರೆಂಬ ಧೈರ್ಯದಿಂದಲೇ ಈ ಪುಸ್ತಕವನ್ನು ಬರೆದಿರುವೆನು.

ಇದೇನಾದರೂ ಪೌರಾಣಿಕ ಕಥೆಯಲ್ಲ, ಕಾದಂಬರಿಯಲ್ಲ; ಆದರೆ ಇದರಲ್ಲಿರುವ ವಿಷಯಗಳು ಸಮಾಜದಲ್ಲಿ ನಡೆದ, ನಡೆಯುವ, ನಡೆಯಬಹುದಾದ ಚಿತ್ರಗಳಾಗಿವೆ. ಈ ಚಿತ್ರಗಳಲ್ಲಿ ಬರುವ ಹೆಸರುಗಳೂ, ಸನ್ನಿವೇಶಗಳೂ ನನ್ನ ಭಾವನಾಸಾಮ್ರಾಜ್ಯಕ್ಕೆ ಮಾತ್ರ ಸೇರಿದವುಗಳಲ್ಲದೆ, ಬೇರೆ ಯಾರಿಗೂ, ಎಂದಿಗೂ ಅನ್ವಯಿಸತಕ್ಕವುಗಳಲ್ಲ.

ಹಸ್ತಪ್ರತಿಯಲ್ಲಿ ಈ ಪುಸ್ತಕಕ್ಕೆ ಮೊದಲು ಬೇರೆ ಹೆಸರಿತ್ತು. ಆದರೆ ಮತ್ತೆ ಈ ಪುಸ್ತಕವು ಕಾರಣಾಂತರಗಳಿಂದ ಹಲವು ತರದ ಸುಳಿಗಳಲ್ಲಿ ಸಿಕ್ಕಿಕೊಂಡುದರಿಂದ ಈಗ ಇದಕ್ಕೆ 'ಸುಳಿಗಾಳಿ' ಎಂಬ ಹೆಸರಿಡಬೇಕಾಯಿತು.

'ನಿತ್ಯಾನಂದ ಗ್ರಂಥಮಾಲೆ'ಯ ಮೊದಲನೆಯ ಕುಸುಮವಾಗಿ ಈ ಪುಸ್ತಕವನ್ನು ಹೊರಡಿಸಿದಂತೆ, ಮುಂದೆಯೂ ಚಿಕ್ಕಚಿಕ್ಕ ಕಥೆ, ಕಾದಂಬರಿ, ಕವಿತಾದಿಗಳನ್ನು ಆಗಾಗ ಈ ಗ್ರಂಥಮಾಲೆಯ ಮೂಲಕ ಪ್ರಕಟಿಸಿ, ಕಿಂಚಿತ್ತಾದರೂ ಕನ್ನಡ ಭಾಷಾಸೇವೆಮಾಡ ಬೇಕೆಂದಿರುವೆನು. ಆದುದರಿಂದ ಮಹಾಜನರು ಈ ಮಾಲೆಗೆ ಹೆಚ್ಚಿನ ಸಹಾಯ ನೀಡುವರಾಗಿ ನನ್ನ ನಂಬುಗೆ.

ಈ ಮಾಲೆಗೆ ಸ್ಥಾಪಕ, ಪೋಷಕ, ಸಹಾಯಕ, ಪ್ರೋತ್ಸಾಹಕರಾಗಿ ಸೇರಿ ಸಹಕರಿಸಿದ ಆ ಮಹನೀಯರುಗಳಿಗೆ ತುಂಬಾ ಕೃತಜ್ಞತೆಗಳು.

ಈ ಪುಸ್ತಕವನ್ನು ಬರೆಯುವಾಗಲೂ, ಬರೆದ ಮೇಲೂ ಹೆಚ್ಚಿನ ಹಿತಸೂಚನೆಗಳನ್ನಿತ್ತು ಹಲವು ತೆರದಿಂದ ಸಹಾಯಮಾಡಿದ ಆ ಎಲ್ಲಾ ವಿದ್ವಾಂಸರುಗಳಿಗೂ, ಮುದ್ರಣಕಾರ್ಯದಲ್ಲಿ ಹೆಚ್ಚಿನ ಸಹಾಯ ಮಾಡಿದ ಮಂಗಳೂರು ಛಾಪಖಾನೆಯ ಮೆನೇಜರರಿಗೂ ಚಿರಋಣಿಯಾಗಿದ್ದೇನೆ. ಅಲ್ಲದೆ ಈ ಪುಸ್ತಕದಲ್ಲಿರುವ ವಿನೋದ ಚಿತ್ರಗಳಲ್ಲಿ 'ಆನಂದನ ಹಸ್ತಲಕ್ಷಣ', 'ಭಟ್ಟರ ಅಧ್ಯಕ್ಷತನ', 'ಜಠರಾಗ್ನಿ,' 'ಚಮತ್ಕಾರದ ಫಲ' ಇವುಗಳು ಈ ಮೊದಲೇ ಪ್ರಕಟವಾದವುಗಳಾಗಿ, ಅವುಗಳನ್ನು ಪ್ರಕಟಿಸಿದ 'ನಗುವನಂದ', 'ಬಡವರಬಂಧು' ಮಾಸ ಪತ್ರಿಕೆಗಳ ಸಂಪಾದಕರ ಉಪಕಾರವನ್ನು ಈ ಮೂಲಕ ನೆನೆಸುತ್ತಾ, ಈ ಪುಸ್ತಕ ರೂಪದ ಹೂವನ್ನು ಕರ್ನಾಟಕಾಂಬೆಯ ಪದತಲದಲ್ಲಿ ಅರ್ಪಿಸುತ್ತೇನೆ.

ಸುಜನ ವಿಧೇಯ,

ಯಂ. ಆರ್. ಪಣಂಬೂರು,
ಲೇಖಕ ಮತ್ತು ಗ್ರಂಥಮಾಲೆಯ ಸಂಪಾದಕ.

ಹರಿಹರ ಸಂಸ್ಕೃತ ಪಾಠಶಾಲಾ,
ಪಣಂಬೂರು.
೧೫—೮—೧೯೩೬.

# ಸುಳಿಗಾಳಿ



## ೧. ಆನಂದನ ಹಸ್ತಲಕ್ಷಣ



ಶರಪಾಡಿ ಆನಂದರಾಜನ ಗುರುತು ಮಂಗಳೂರಿನ ಲಾಟಾನು ಕಂಬಗಳಿಗೂ ಚೆನ್ನಾಗಿ ಗೊತ್ತಿದೆ— ಎಂದ ಮೇಲೆ ಇನ್ನಾರಿಗೆ ತಾನೇ ಗೊತ್ತಿರದು? ಒಂದು ಸಾರಿ ಬೊಂಬಾಯಿಯ ಪೋಷ್ಟ ಮಾಸ್ತರರು "ಆನಂದರಾಜ" ಎಂದಿಷ್ಟೇ ಎಡ್ರಸ್ಸು ಬರೆದಿದ್ದ ಕವರೊಂದನ್ನು ನೆಟ್ಟಗೆ ಶರಪಾಡಿಗೇ ಕಳುಹಿಸಿದ್ದರಂತೆ. ಯಾರಾದರೂ "ಆ. ರಾ" ಎಂದೊಂದು ಕಾಗದದಲ್ಲಿ ಬರೆದು ಯಾವ ಹಳ್ಳಿಯಲ್ಲಿ ಒಗೆದರೂ ಅದು ನೇರಾಗಿ ಆನಂದರಾಜನಿಗೇ ತಲಪುತ್ತಿತ್ತು. ಒಂದೇ ಮಾತಿನಲ್ಲಿ ಹೇಳುವುದಿದ್ದರೆ ಆನಂದರಾಜನು ಎಲ್ಲರಿಗೂ ಪರಿಚಿತನು.

ಆನಂದರಾಜನು, ಒಂದು ಸಾರಿ ಶರಪಾಡಿಯಲ್ಲಿ ಭಾಗವತ ವಾಚನ ನಡೆವಾಗ ಇಪ್ಪತ್ತೈದು ರೂಪಾಯಿಗಳನ್ನೊಬ್ಬನೇ ಕೊಟ್ಟಿದ್ದನು. ಇವನ ಆಸ್ತಿಕತೆಯು ಇದರಿಂದ ವ್ಯಕ್ತವಾಗದೇ? ಆನಂದನು ಶಾಸ್ತ್ರಪುರಾಣಗಳೆಲ್ಲಾ ಅಕ್ಷರಶಃ ಸತ್ಯವೆಂದು ನಂಬುವಂತಹರ ಜಾತಿಗೆ ಸೇರಿದವನು.

ಜೋಯಿಸರಾರಾದರೂ ಶರಪಾಡಿಗೆ ಬಂದರೆಂದರೆ ತೀರಿತು. ಆನಂದನು ಮನೆಯೊಳಗಿನ ಜಾತಕದ ಮೂಟೆಯನ್ನು ಹೊತ್ತುತಂದು, ಎಂಟುಹತ್ತು ದಿನಗಳ ವರೆಗಾದರೂ ನಿದ್ರಾಹಾರಾದಿಗಳನ್ನು ತೊರೆದು, ಜೋಯಿಸರೊಡನೆ ಜಾತಕ ತೋರಿಸುವನು. ಅಂತೂ ಕಡೆಗೆ ಜೋಯಿಸರಿಗೆ ತಲೆಸಿಡಿತ ಉಂಟಾಗುವಂತೆ ಮಾಡಿ ಬಿಡುವನು. ಯಾವ ಜೋಯಿಸರಿಂದಲೂ ಇವನ ಪ್ರಶ್ನೆಗಳಿಗುತ್ತರವಿತ್ತು ಪಾರಾಗಲು ಸಾಧ್ಯವಿರಲಿಲ್ಲ. ಪ್ರತಿಯೊಂದು ವಿಷಯವನ್ನೂ ವಿವರಿಸಿ ಹೇಳಿಯೇ ತೀರಬೇಕು. ಕಡೆಗೆ ಅವನ ಮನೆಯ ಮಾಡಿನಲ್ಲಿ ಎಷ್ಟು ಹಂಚುಗಳಿವೆಯೆಂದೂ, ಅವನ ಜಾತಕ ನೋಡಿ ಹೇಳುವ ಸಂದರ್ಭ ಬರುವುದು. ಅಂತೆಯೇ ಕಳೆದ ವರ್ಷ ಒಬ್ಬ ಜ್ಯೋತಿಃಶಾಸ್ತ್ರ ಪಂಡಿತನು ಆನಂದನ ಎಲ್ಲಾ ಪ್ರಶ್ನೆಗಳಿಗೆ ಉತ್ತರವಿತ್ತು, ಕಡೆಗೆ ಅವನ ಜಾತಕದ ಆಧಾರದ ಮೇಲೆ ತಲೆಯ ಕೂದಲುಗಳ ಸಂಖ್ಯೆಯನ್ನು ಹೇಳಲಾರದೆ ತಾನಿನ್ನು 'ನಿಮಿತ್ತ'ವನ್ನೇ ಹೇಳುವುದಿಲ್ಲೆಂದು ಶಪಥ ಮಾಡಿದ್ದನು!

ಇನ್ನು ಸ್ವಪ್ನಗಳ ವಿಚಾರವಾಗಿ ಆನಂದನಿಗೆ ತುಂಬಾ ವಿಶ್ವಾಸ. ಸಣ್ಣದೊಂದು ಕನಸು ಬಿತ್ತೆಂದರೆ ಸರಿ, ಮರುದಿನ ನೆರೆಮನೆಯ ಸುಬ್ಬಾಭಟ್ಟರಿಗೆ ಪಂಚಾಂಗ ನೋಡಿ ಫಲ ಹೇಳುವ ಕೆಲಸವು ತಪ್ಪಲಾರದು. ಒಂದು ದಿನ ರಾತ್ರಿ ಆನಂದನು ಸ್ವಪ್ನದಲ್ಲಿ ತಾನು ನೇತ್ರಾವತೀ ನದಿಯ ದಡದಲ್ಲಿ ಹೋಗುತ್ತಿದ್ದಂತೆಯೂ, ತನಗೊಂದು ನಿಧಿ ದೊರೆತಂತೆಯೂ ಕಂಡನು. ಮರುದಿನ ಬೆಳಗ್ಗೆ ಎದ್ದವನೇ ನೆಟ್ಟಗೆ ಸುಬ್ಬಾಭಟ್ಟರಲ್ಲಿಗೆ ಹೋದನು. ಆಗ ಸುಬ್ಬಾಭಟ್ಟರು "ಆನಂದಾ, ಏನು ಬಂದೆ?" ಎಂದರು.

ಆನಂದನು ರಾತ್ರೆಯ ಸ್ವಪ್ನದ ವಿಚಾರ ಹೇಳಿ, ಮತ್ತೆ "ಭಟ್ಟರೇ, ದಯವಿಟ್ಟು, ಅದರ ಫಲ ಹೇಳುವಿರಾ?" ಎಂದನು

ಭಟ್ಟರು ಒಂದು ಘಂಟೆ ತನಕ ಕೂಡಿಸಿ, ಗುಣಿಸಿ, ಕಳೆದು, ಭಾಗಿಸಿ ಕಡೆಗೆ "ಆನಂದಾ, ನಿನಗೆ ನಿಜವಾಗಿ ಇನ್ನೆರಡು ತಿಂಗಳು ಗಳೊಳಗೆ ಒಂದು ಕೊಪ್ಪರಿಗೆ ಸಿಗುವುದು. ಸ್ವಲ್ಪ ಪ್ರಯತ್ನ ಮಾತ್ರ ಮಾಡು" ಎಂದು ನುಡಿದರು. ಭಟ್ಟರ ಮಾತು ಕೇಳಿ ಆನಂದನು ತಾಳೆಮರದಷ್ಟು ಎತ್ತರ ಏರಿಬಿಟ್ಟನು.

"ಭಟ್ಟರೇ, ಈ ವಿಷಯವನ್ನು ಯಾರಿಗೂ ಹೇಳಬೇಡಿರಿ" ಎಂದು ಆನಂದನು ಭಟ್ಟರಿಗೊಂದು ಜೊತೆ ಧೋತರವನ್ನು ಉಡುಗೊರೆಯಿತ್ತು ಮನೆಗೆ ಮರಳಿದನು. ಮತ್ತು ಅಂದಿನಿಂದ ಮನಸ್ಸಿನಲ್ಲೇ ಗಾಳಿ ಗೋಪುರ ಕಟ್ಟತೊಡಗಿದನು.

ಭಟ್ಟರೊಡನೆ, ಈ ಸಂಗತಿಯನ್ನು ಬಯಲುಪಡಿಸಕೂಡದೆಂದು ಆನಂದನು ಹೇಳಿದ್ದರೂ, ಗುಟ್ಟು, ಭಟ್ಟರಿಂದ ಕೃಷ್ಣಯ್ಯನವರಿಗೂ ಅವರಿಂದ ಕಾಂತಪ್ಪ ಪೂಜಾರಿಗೂ. ಅವನಿಂದ ಇನ್ನೊಬ್ಬ ಮತ್ತೊಬ್ಬ ನೆಂದು ಊರಲ್ಲೆಲ್ಲಾ ವಾಯುವಿನಂತೆ ಹಬ್ಬಿಬಿಟ್ಟಿತು. ಊರವರೆಲ್ಲರ ಬಾಯಿಯಲ್ಲಿಯೂ ಇದೇ ಮಾತಾಯಿತು.

ಸ್ವಪ್ನವಾದಂದಿನಿಂದ ಆನಂದನು ಪ್ರತಿದಿನವೂ ನೇತ್ರಾವತೀ ನದಿಯ ತೀರದಲ್ಲಿ ಸಂಜೆಗೆ ವಾಯುಸೇವನೆಯ ನೆವದಿಂದ ಅಡ್ಡಾಡುವ ಪರಿಪಾಠವನ್ನಿಟ್ಟುಕೊಂಡನು. ನಿಧಿ ದೊರೆಯುವುದೆಂಬ ಸಂತೋಷ ದಿಂದ ಆನಂದನು ತನ್ನ ರೀತಿಯನ್ನೇ ಬದಲಾಯಿಸಿಕೊಂಡನು. ಉಣ್ಣು ವಾಗಲೂ ನಿಧಿಯ ಯೋಚನೆ, ಉಡುವಾಗಲೂ ನಿಧಿಯ ಯೋಚನೆ. ಈ ಎಲ್ಲಾ ಯೋಚನೆಗಳಿಗೆ ಸ್ನೇಹಿತರು ಉಪದ್ರವಿಗಳಾಗುವರೆಂದು ಎಲ್ಲರ ಸ್ನೇಹವನ್ನು ಕಡಿಮೆ ಮಾಡಿದನು. ಇದರಿಂದ ಸ್ನೇಹಿತರೆಲ್ಲರೂ ಈತನನ್ನು ಮೋಸಗೊಳಿಸಬೇಕೆಂದು ಸಂಕಲ್ಪಮಾಡಿ ಸಮಯ ಕಾಯುತ್ತಿದ್ದರು.

ಅದೊಂದು ಆದಿತ್ಯವಾರ. ಆಫೀಸಿಗೆ ರಜೆಯಿದ್ದ ಕಾರಣ, ಸ್ನೇಹಿತರ ಕೋರಿಕೆಯಂತೆ ನಾನು ಶರಪಾಡಿಗೆ ಹೋದೆನು. ಸ್ನೇಹಿತ

ರೊಡನೆ ಆ ದಿನವನ್ನು ಸಂತೋಷದಿಂದ ಕಳೆಯಬೇಕೆಂದು ಮೊದಲೇ ಎಣಿಸಿದ್ದೆನು. ಅಂತೆಯೇ ನಾವೆಲ್ಲರೂ ಆಡ್ದಾಡಲಿಕ್ಕೆಂದು ನೇತ್ರಾವತೀ ನದಿಯ ದಡಕ್ಕೆ ಹೋಗಿ ಹೊಯಿಗೆಯಲ್ಲಿ ಕುಳಿತೆವು. ಆನಂದರಾಜನು ಆ ದಿನದ ನಮ್ಮ ಆನಂದದಲ್ಲಿ ಭಾಗಿಯಾಗಿದ್ದನು. ನೇತ್ರಾವತಿಯು ಮಂದಗತಿಯಿಂದ ಪ್ರವಹಿಸುತ್ತಿದ್ದಳು. ಸುತ್ತುಮುತ್ತಲಿನ ಆಗಿನ ನೋಟವು ಮನಮೋಹಕವಾಗಿತ್ತು. ನಾನು ಗೆಳೆಯರೊಡನೆ ಹರಟೆ ಹೊಡೆಯುತ್ತಾ ಮಧ್ಯೆ ಮಧ್ಯೆ ಕೈತಟ್ಟಿ 'ಕೇ, ಕೇ' ಹಾಕಿ ನಗುತ್ತಾ ಕುಳಿತಿದ್ದೆನು. ಆಗ ಫಕ್ಕನೆ ಆನಂದನು ಎದ್ದು ಏನನ್ನೋ ಯೋಚಿಸುತ್ತಾ ನೆಟ್ಟಗೆ ಹೊರಟುಹೋದನು. ಆಗ ನರಸಿಂಗರಾಯನು "ಓಹೋ! ಆನಂದನಿಗೆ ಇಂದೇ ನಿಧಿ ದೊರೆಯುವ ಹಾಗಿದೆ" ಎಂದು ನಕ್ಕನು. ಉಳಿದವರೂ "ಹೌದು, ಅದಕ್ಕಾಗಿಯೇ ಫಕ್ಕನೆ ಹೊರಟು ಹೋದುದು" ಎಂದು ಕೈತಟ್ಟಿದರು. ನನಗಿದೊಂದರದೂ ಅರ್ಥವಾಗ ಲಿಲ್ಲ. ಸಂಗತಿ ಏನೆಂದು ವಿಚಾರಿಸಲು ಎಲ್ಲವೂ ತಿಳಿದುಬಂತು. ಆಗ ಗೋಪಣ್ಣನು, "ಸ್ನೇಹಿತರೆಲ್ಲರನ್ನೂ ಮರೆತಿರುವ ಆನಂದನನ್ನು ಹೇಗಾದರೂ ತಮಾಷೆಮಾಡಬೇಕು. ಇರಲಿ, ಆತನಿಗೆ ನಿಧಿದೊರೆಯುವ ಭರದಲ್ಲಿ ನಾವು ಕೂಡಾ ಬೇಡದವರಾದೆವೇ?" ಎಂದನು.

ವಿಷಯ ಪರಿಜ್ಞಾನವಾದ ಮೇಲೆ ನಾನು "ಗೆಳೆಯರೇ, ನಿಮ್ಮವರಲ್ಲಿ ಯಾರಾದರೊಬ್ಬರ ಮನೆ, ಕುಟುಂಬ, ವ್ಯವಹಾರಗಳ ವಿಷಯಗಳನ್ನೂ, ಆನಂದನ ಸರ್ವ ವಿಷಯಗಳನ್ನೂ ನನಗೆ ತಿಳಿಸಿರಿ. ನಾನು ಅವನನ್ನು ಮೋಸಗೊಳಿಸುವೆನು. ನೀವೆಲ್ಲರೂ ನನಗೆ ಸಹಾಯಕರಾಗಿರಬೇಕು. ನಾನೆಂದುದಕ್ಕೆಲ್ಲಾ ನಗದೆ, ಆಶ್ಚರ್ಯ ಪಡುವವರಂತೆ ನಟಿಸಬೇಕು" ಎಂದೆನು. ಗೆಳೆಯರೆಲ್ಲರೂ ಒಪ್ಪಿ, ನರಸಿಂಗರಾಯನ ಮತ್ತು ಆನಂದನ ಜೀವನ ಚರಿತ್ರೆಯೆಲ್ಲವನ್ನೂ ಹೇಳಿದರು. ಅಷ್ಟರಲ್ಲಿ ನಿಧಿ ಹುಡುಕಲು ಹೋದ ಆನಂದನು ಮುಖ ಸಪ್ಪಗೆ ಮಾಡಿಕೊಂಡು ಬಂದನು.

ನಾನು ನರಸಿಂಗರಾಯನ ಕೈನೋಡಿ ಆತನಿಗೆ ಅಣ್ಣತಮ್ಮಂದಿರೆಷ್ಟು, ಅಕ್ಕ-ತಂಗಿಯರೆಷ್ಟು, ಆಸ್ತಿ-ಪಾಸ್ತಿಯೆಷ್ಟು, ಮಕ್ಕಳೆಷ್ಟು ಮೊದಲಾದ ವಿಚಾರಗಳನ್ನೂ, ಮುಂದೆ ಆಗುವ ವಿಚಾರಗಳನ್ನೂ ಹೇಳಿದೆನು. ಆದರೆ ಆದುದೆಲ್ಲಾ ನಿಜ; ಆಗುವುದೆಲ್ಲಾ ಸುಳ್ಳು. ಆಗ ಮಿತ್ರವರ್ಗದ ಕೃಷ್ಣರಾಯನು "ರಾಮರಾಯರೇ, ನೀವೆಂದು ಹಸ್ತಲಕ್ಷಣ ಹೇಳಲು ಕಲಿತಿರಿ?" ಎಂದು ಪ್ರಶ್ನಿಸಿದನು. ಇಷ್ಟೆಲ್ಲಾ ನಡೆಯುತ್ತಿದ್ದಾಗ ಆನಂದನು ಹತ್ತಿರವೇ ಕುಳಿತಿದ್ದನು. ಆಗ ನಾನು "ಕೃಷ್ಣರಾಯರೇ, ಕೆಲವು ತಿಂಗಳ ಹಿಂದೆ ನಾನು ಮೈಸೂರಿಗೆ ಹೋಗಿದ್ದಾಗ ಅಲ್ಲೊಬ್ಬ ಮಹಾತ್ಮನಿಂದ ನನಗೀ ವಿದ್ಯೆ ಲಭಿಸಿತು" ಎಂದೊಂದು 'ಪಂಜಾಬ್ ಮೈಲ್'' ಬಿಟ್ಟುಬಿಟ್ಟೆ. ಎಲ್ಲರೂ ಹೇಗೋ ಮಾಡಿ, ಉಕ್ಕಿ ಬರುವ ನಗುವನ್ನು ತಡೆದು, ಆಶ್ಚರ್ಯಪಟ್ಟವರಂತೆ ನಟಿಸಿದರು.

ಇದೆಲ್ಲವನ್ನೂ ಕೇಳಿ ಆನಂದನು ಕಿವಿಗಳನ್ನು ಮೊಲದ ಕಿವಿಗಳಂತೆ ನೆಟ್ಟಗೆ ಮಾಡಿಕೊಂಡು ನನ್ನ ಸಮೀಪಕ್ಕೆ ಬಂದನು. ಕೈಯನ್ನು ತೋರಿಸಿ, ನಿಧಿ ಸಿಗುವುದು ನಿಜವೋ ಎಂದು ತಿಳಿದುಕೊಳ್ಳುವ ಲವಲವಿಕೆಯು ಆತನಲ್ಲಿ ಹೆಚ್ಚಾಯಿತು. ಅದರಿಂದಾಗಿ "ರಾಯರೇ ನೀವು ಹಸ್ತಲಕ್ಷಣ ಹೇಳುವಿರೆಂದು ಈಗ ತಾನೆ ನನಗೆ ತಿಳಿಯಿತು. ನನ್ನ ಕೈಯ್ಯನ್ನೊಮ್ಮೆ ನೋಡಿ ಲಕ್ಷಣ ಹೇಳುವಿರೋ?" ಎಂದನು. ನನಗೂ ಅಷ್ಟೇ ಬೇಕಾಗಿದ್ದುದು. ಗೆಳೆಯರೆಲ್ಲರೂ ಆನಂದನ ಅತ್ಯಾಶೆಗೆ ನಕ್ಕರು. ತೋರುವಿಕೆಗೆ ದಾಕ್ಷಿಣ್ಯವನ್ನು ತೋರುತ್ತಾ, ಆನಂದನ ಕೈಹಿಡಿದು "ಆನಂದಾ, ನನಗೇನೋ ಸ್ವಲ್ಪ ಸ್ವಲ್ಪ ಮಾತ್ರ ಗೊತ್ತಿದೆ. ಆದರೂ ತಿಳಿದುದನ್ನು ಹೇಳಲೇನು?" ಎನ್ನುತ್ತಾ ಆತನ ಕೈಯ್ಯನ್ನು ಅತ್ತಿತ್ತ ಹೊರಳಿಸಲು ಆರಂಭಿಸಿದೆನು.

ಎಲ್ಲರೂ ಕರವಸ್ತ್ರಗಳಿಂದ ಬಾಯಿಯನ್ನು ಒತ್ತಿಟ್ಟು ನಗುವನ್ನಡಗಿಸುವ ಯತ್ನ ಮಾಡುತಿದ್ದರು. ಪಾಪ! ನಾನಿಷ್ಟೆಲ್ಲಾ ಮೋಸಮಾಡಿ ಸುಳ್ಳು ಹೇಳುವೆನೆಂದು ಆನಂದನಿಗೆ ಹೇಗೆ ಗೊತ್ತಾಗಬೇಕು?

ಆತನ ಕೈಯ್ಯನ್ನು ಹತ್ತು ನಿಮಿಷಗಳ ತನಕ ಅತ್ತಿತ್ತ ಹೊರಳಿಸಿ ಅವನ ಮನೆ ವಿಚಾರ, ಸ್ವಂತ ವಿಚಾರಗಳನ್ನು 'ಚಾ ಚೂ' ತಪ್ಪದೆ ಸ್ನೇಹಿತರು ಹೇಳಿಕೊಟ್ಟಂತೆ ಹೇಳಿದನು. ಆನಂದನಿಗೆ ನನ್ನ ಮಾತಿನ ಮೇಲೆ ಹೆಚ್ಚಿನ ವಿಶ್ವಾಸ ಉಂಟಾಯಿತೆಂದು ಅವನ ಮುಖಭಾವ ದಿಂದಲೇ ತಿಳಿಯಿತು. ಅವನ ಗೃಹಕೃತ್ಯದ ವಿಷಯ ಸ್ನೇಹಿತರು ಮೊದಲಾಗಿ ನನಗೆ ಹೇಳಿಕೊಟ್ಟಿದ್ದರೆಂದು ಗೊತ್ತಾದರಲ್ಲವೇ ಅವನು ಅವಿಶ್ವಾಸಪಡುವುದು. ಆ ವರೆಗಿನ ವಿಷಯವೆಲ್ಲವೂ ಸತ್ಯ. ಹಿಂದಿನ ದೆಲ್ಲವನ್ನೂ ಹೇಳಿದ ಮೇಲೆ "ಆನಂದಾ, ನೀನು ಇನ್ನು ಕೆಲವು ತಿಂಗ ಳೊಳಗೆ ಸುಂದರ ಸ್ತ್ರೀಯೋರ್ವಳನ್ನು ಮದುವೆಯಾಗಿ ಸುಖಪಡುವೆ. ಮತ್ತು ನಿನಗೆ ಆರು ಗಂಡು ಮಕ್ಕಳೂ, ಒಂಬತ್ತು ಹೆಣ್ಣು ಮಕ್ಕಳೂ ಆಗುವರು. ಈ ಮೊದಲು ನಿನಗೊಂದು ನಿಧಿ ದೊರೆಯುವುದು. ಬಹುಶಃ ನದಿಯ ಬದಿಯಲ್ಲೇ ದೊರೆಯುವುದು. ನಿಧಿಯು ಸಾಧಾರಣ ಒಂದು ಕೊಡಪಾನದಂತಿರುವುದು. ಅದರಲ್ಲಿ ಚಿನ್ನವೇ ತುಂಬಿರು ವುದು" ಎಂದು ಆತನ ಮುಖವನ್ನೊಮ್ಮೆ ದಿಟ್ಟಿಸಿದೆನು. ಸ್ವಪ್ನದಲ್ಲಿ ಕಂಡುದನ್ನೂ, ಭಟ್ಟರು ಹೇಳಿದುದನ್ನೂ, ನಾನು ಹೇಳಿದುದನ್ನೂ ಕೇಳಿ ಇಬ್ಬರ ಯೋಚನೆಯೂ ಒಂದಾಗಿರುವುದನ್ನು ನೋಡಿ, ನಿಧಿ ದೊರೆಯುವುದು ಖಂಡಿತವೆಂದು ಆನಂದನು ನಕ್ಕುಬಿಟ್ಟನು. ಅವ ನೊಂದಿಗೆ ನನ್ನಾಪ್ತರು ನಕ್ಕ ನಗುವು ದಿಗಂತವನ್ನು ಸೇರಿತು. ಅಂತು ನಿಧಿಯೇನೋ ನಿಜವಾಗಿ ಸಿಗುವುದೆಂದು ಆನಂದನಿಗೆ ಖಚಿತವಾಯಿತು ನನ್ನ ಮಾತಿನಲ್ಲಿ ಒಂದಿಷ್ಟೂ ಅವಿಶ್ವಾಸಪಡದೆ ನಂಬಿದನು.

ಆಗ "ರಾಮರಾಯನು ಹಸ್ತಲಕ್ಷಣ ಹೇಳುವುದರಲ್ಲಿ ಬಹಳ ನಿಪುಣನು. ಇಂತಹ ನಿಪುಣನನ್ನು ನಾನಿದು ತನಕ ನೋಡಿಲ್ಲ"ವೆಂದು ನಾಗರಾಜನು ಪ್ರಶಸ್ತಿಪತ್ರವಿತ್ತನು. "ಆನಂದನ ದೆಸೆ ಬಲವಾಗಿದೆ. ನಮ್ಮ ಗುರುತೇ ಇನ್ನಾತನಿಗೆ ಸಿಗದು" ಎಂದು ಉಸುರಿದನು ಗೋವಿಂದ ಪಂಡಿತನು.

ಆನಂದನು ಆಗ ಹರ್ಷಾತಿರೇಕದಿಂದ ಮೈಮರೆದಿದ್ದನು. ಒಂದರ ಹಿಂದೊಂದು ಯೋಚನೆಗಳು ಅವನ ತಲೆಯಲ್ಲಿ ತಾಂಡವವಾಡ ತೊಡಗಿದುವು. ಕಡೆಗೆ "ರಾಮರಾಯರೇ, ನಿಜವಾಗಿ ನಿಧಿ ಸಿಗುವುದೇ?" ಎಂದನು.

"ನೀನು ಇನ್ನಾರಿಗಾದರೂ ನಿನ್ನ ಕೈತೋರಿಸು. ಅವರೂ ಈ ಮಾತುಗಳನ್ನೇ ಹೇಳುವರು. ನೀನೇನೂ ಯೋಚಿಸಬೇಕಾಗಿಲ್ಲ. ಸ್ವಲ್ಪ ಮಾತ್ರ ಪ್ರಯತ್ನ ಪಡಬೇಕಾಗುವುದು" ಎಂದು ನನ್ನ ಉತ್ತರ. ಆ ಮೇಲೆ ಸಂಜೆಯಾಯಿತೆಂದು ನಾವೆಲ್ಲರೂ ಅಲ್ಲಿಂದ ಹೊರಟೆವು.

ಆ ರಾತ್ರಿ ಆನಂದನ ಮನೆಯಲ್ಲೇ ನಮಗೆಲ್ಲಾ ಊಟ ಉಪಚಾರ ಗಳಾದುವು. ರಾತ್ರೆ ನಾಗರಾಜನ ಮನೆಯಲ್ಲಿ ಮಲಗಿದೆವು. ಆದರೆ ರಾತ್ರೆಯೆಲ್ಲಾ ಜಾಗರವೇ. ಬೆಳಗಿನ ತನಕವೂ ಹಸ್ತಲಕ್ಷಣದ ಮತ್ತು ನಿಧಿಯ ವಿಷಯ; ನಕ್ಕು ನಕ್ಕು ಹೊಟ್ಟೆ ಹುಣ್ಣಾಯಿತು. "ಈ ವಿಷಯ ಗಳೆಲ್ಲವೂ ಗುಟ್ಟಿನಲ್ಲಿರಲಿ" ಎಂದು ನಾನು ಇತರರಿಗೆಲ್ಲಾ ಹೇಳಿದೆನು. ಮರುದಿನ ಮಂಗಳೂರಿಗೆ ಹೊರಡುವಾಗ ಆನಂದನ ಉಪಚಾರದ ಮಾತುಗಳು ನನ್ನ ಕಿವಿಗಳನ್ನು ಕಿವುಡಾಗಿ ಮಾಡಿದುವು.

ಆನಂದನು ಹಸ್ತಲಕ್ಷಣದ ಮೇಲಿನ ಭರವಸೆಯಿಂದಲೂ ನನ್ನ ಮಾತಿನ ವಿಶ್ವಾಸದಿಂದಲೂ, ಇಂದಿಗೂ ನದಿಯ ಬದಿಯಲ್ಲೇ ಅಲೆಯುತ್ತಿರುವನು.



# ೨. 'ವಿಧಿ ವಿಲಾಸ'




ವ ದೊಡ್ಡ ಮನುಷ್ಯರೇ ಆಗಲಿ, ಯಾವ ಊರಿನವರೇ ಆಗಲಿ, ಮಂಗಳೂರಿಗೆ ಬಂದು 'ವಿಧಿ ವಿಲಾಸ'ವನ್ನು ಹೊಗದಿದ್ದರೆ, ಅಂಥವರಿಗೆ ಮೋಕ್ಷ ಸಿಗಲಾರದೆಂದು ಸೋಮಾರಿಗಳ ಎಣಿಕೆ. 'ವಿಧಿ ವಿಲಾಸ'ದ ಮಹಿಮೆಯೇ ಅಂತಹುದು. ಅಲ್ಲಿನ ಕಾಫಿ, ಟೀ, ಕುಡಿಯದಿದ್ದರೆ ಯಾರಿಗೂ ಸುಖವಾಗದು. ಕಡಮಾಡಿಯಾಗಲೀ, ಬೇಡಿಯಾಗಲೀ, ಕಾಡಿಯಾಗಲೀ ಎಂತಾದರೂ ಮಾಡಿ ದಿನಕ್ಕೆರಡು ಬಾರಿ 'ವಿಧಿ ವಿಲಾಸ'ಕ್ಕೆ ಹೋಗಲೇಬೇಕೆಂದು ಸರ್ವರ ಮತ. ಮಂಗಳೂರಿನ ನಂಬ್ರ ೮ನೇ ಬೀದಿಯ ೧೫ನೇ ಮನೆಯ 'ವಿಧಿ ವಿಲಾಸ' ಹೋಟೇಲೆಂದರೆ ಇಂದು ಹುಟ್ಟಿದ ಮಗುವಿನಿಂದ, ನೂರು ವರ್ಷಕ್ಕೆ ಒಂದೇ ಒಂದು ದಿನ ಬಾಕಿ ಉಳಿದಿರುವವರ ವರೆಗಿನ ಎಲ್ಲರಿಗೂ ಆನಂದ. ಒಂದು ಬಾರಿ ಅಲ್ಲಿನ ಹಲ್ವಾ, ಕ್ಷೀರಾದ ರುಚಿ ನೋಡಿದರೆಂದರೆ ತೀರಿತು. ಹೊಟ್ಟೆ ಬಿರಿಯುವ ತನಕ ತಿನ್ನದೆ ಬಿಡರು. ಅಜೀರ್ಣಕ್ಕಾಗಿ ಮರುದಿನ ಭೇದಿ ಔಷಧಿ ಪಡೆದರೂ ಹಲ್ವವನ್ನು ಮರೆಯಲಾರರು.

ಒಂದು ಸಲ ಕುಂದಾಪುರದ ಪ್ರಸಿದ್ಧ ವೈದ್ಯರಾದ ಈಶ್ವರ ಪಂಡಿತರು ಕೆಲಸದ ನಿಮಿತ್ತ ಮಂಗಳೂರಿಗೆ ಬಂದಿದ್ದು 'ವಿಧಿ ವಿಲಾಸ'ದ ಊಟ ಉಪಚಾರಕ್ಕೂ, ಕಾಫಿ ತಿಂಡಿಗೂ ಮೆಚ್ಚಿ ಪ್ರಶಸ್ತಿ ಪತ್ರವನ್ನು ಕೂಡಾ ಕೊಟ್ಟಿದ್ದರಂತೆ. ಆದುದರಿಂದಲೇ 'ವಿಧಿ ವಿಲಾಸ'ದ ಮೆನೇಜರ್ ಆನಂದರಾಯರು ಪತ್ರಿಕೆಗಳಲ್ಲಿ "ಕುಂದಾಪುರದ ಪ್ರಸಿದ್ಧ

ವೈದ್ಯರಾದ ಈಶ್ವರ ಪಂಡಿತರಿಂದಲೂ ಪ್ರಶಸ್ತಿ ಪತ್ರ ದೊರೆತಿದೆ. ನೀವು ಒಮ್ಮೆ 'ವಿಧಿ ವಿಲಾಸ'ವನ್ನು ಸಂದರ್ಶಿಸಿದಲ್ಲಿ ಸಮಾಧಾನ ವಾದೀತು . . . ." ಇತ್ಯಾದಿಯಾಗಿ ಜಾಹೀರಾತು ಕೂಡಾ ಕೊಟ್ಟಿದ್ದರು. ಹೋಟೇಲಿನ ಹೊರಗೆ ತೂಗಾಡಿಸಿದ್ದ 'ಸ್ಕ್ಯಾನು ಬೋರ್ಡ'ನ್ನು ನೋಡಿದೊಡನೆ ಎಂತಹ ಜಿಪುಣನಿಗಾದರೂ ಒಂದು ಸಲ ಒಳಹೊಕ್ಕಿ ಬಿಡಬೇಕೆನ್ನಿಸದಿರದು. ಮಂಗಳೂರಿನ ಕಾಫಿ ಹೋಟೇಲುಗಳಲ್ಲಿ 'ವಿಧಿ ವಿಲಾಸ'ವೇ ಅತ್ಯುತ್ತಮವೂ, ಪ್ರಖ್ಯಾತಿಪಟ್ಟುದೂ ಆಗಿತ್ತು. ಅದುಕಾರಣದಿಂದಲೇ ಯಾವ ಊರಿನವರು ಬಂದರೂ ಅಲ್ಲಿಗೇ ಹಿಂಡುಕಟ್ಟಿ ಹೋಗುತ್ತಿದ್ದುದು. ಇರಲಿ.

ವಿಧಿ ವಿಲಾಸವನ್ನು ಮೀರಲು ಯಾರಿಂದಲೂ ಸಾಗದೆಂಬ ಮಾತು ಅಕ್ಷರಶಃ ನಿಜ. ಅಂತೆಯೇ ವಿಧಿಯ ಕಾಲಚಕ್ರದ ಸೆಳೆತಕ್ಕೆ ಸಿಕ್ಕಿ ಕೆಲವು ಸಮಯದಲ್ಲಿ 'ವಿಧಿ ವಿಲಾಸ'ವೂ ನಜ್ಜುಗುಜ್ಜಾಗಿ ಹೋಯಿತು. ಕೆಲಕಾಲದಿಂದ ಎಲ್ಲಾ ಪತ್ರಿಕೆಗಳಲ್ಲಿ ಜಾಹೀರಾತು ಕೊಟ್ಟು, ಜನರಿಗೆ ಸ್ವರ್ಗಾನುಭವ ಉಂಟುಮಾಡುತ್ತಿದ್ದ 'ವಿಧಿ ವಿಲಾಸ'ವು ಮೆನೇಜರ್ ಆನಂದರಾಯರ ಅಕಾಲ ಮರಣದಿಂದ ಬಿದ್ದು ಹೋಯಿತು. ಆನಂದರಾಯರ ಅಕಾಲ ಮರಣಕ್ಕೆ ಕೂಡಾ ಯಾರೂ ಕೂಗಿಲ್ಲ. ಆದರೆ 'ವಿಧಿ ವಿಲಾಸ' ಎಂದು ತ್ರಿವರ್ಣದಿಂದ ಬರೆದ ಹಲಗೆ ತೆಗೆಯುವಾಗ ಮಾತ್ರ ಎಷ್ಟೋ ಜನರು ಕಣ್ಣೀರು ಸುರಿಸಿ ಕೂಗಿದರು. ಮೂರು ದಿನಗಳ ತನಕ ಉಪವಾಸಮಾಡಿ, ಕಡೆಗೆ ಉದರಭರಣಕ್ಕಾಗಿ ಇನ್ನೊಂದು 'ವಿಲಾಸ'ದ ಮೆಟ್ಟಲನ್ನು ತುಳಿಯಲಾರಂಭಿಸಿದರು. 'ವಿಧಿ ವಿಲಾಸ'ದ ತೇಜಸ್ಸೂರ್ಯನು ಅಂದಿಗೇ ಅಸ್ತಮಿಸಿದನು. ಇದಾದ ಕೆಲವು ಸಮಯದ ಮೇಲೆ, ಆ ಕಟ್ಟೋಣದ ಒಡೆಯರು ಕಟ್ಟಡವನ್ನು ಮಾಸ್ತರ್ ಶ್ರೀನಿವಾಸರಾಯರಿಗೆ ಬಾಡಿಗೆಗೆ ಕೊಟ್ಟರು. ಬಳಿಕ ಶ್ರೀನಿವಾಸರಾಯರು ತನ್ನ ಹೆಂಡತಿ ಮಕ್ಕಳೊಡನೆ ಅಲ್ಲಿ ಇರತೊಡಗಿದರು.

ಹೀಗಿರಲು ಕುಂದಾಪುರದ ಈಶ್ವರ ಪಂಡಿತರ ತಮ್ಮ ಅಣ್ಣಪ್ಪ ಪಂಡಿತನು ಒಮ್ಮೆ ಮಂಗಳೂರಿಗೆ ಬಂದನು. ಪತ್ರಿಕೆಗಳಲ್ಲಿನ ಜಾಹೀರಾತು ನೋಡಿಯೂ, ಅಣ್ಣನ ಮಾತು ಕೇಳಿಯೂ, ಅಣ್ಣಪ್ಪನು 'ವಿಧಿವಿಲಾಸ'ಕ್ಕೆ ಮನಸೋತಿದ್ದನು. ಇದುವರೆಗೆ ಅಣ್ಣನ ಬಾಯಿಯಿಂದಲೇ ಅಲ್ಲಿನ ವಿಲಾಸಗಳನ್ನು ಕೇಳಿದ್ದರಿಂದ ಈಗ ಸ್ವತಹ ಹೋಗಿ, ನೋಡಿ, ಹಿಗ್ಗಬೇಕೆಂಬ ಲವಲವಿಕೆಯು ಅಣ್ಣಪ್ಪನಲ್ಲಿ ಹೆಚ್ಚಾಯಿತು. ಯೋಚಿಸಿದವನೇ ನೆಟ್ಟಗೆ ಹೊರಟು ನಂಬ್ರ ಲನೇ ಬೀದಿಯ ೧೫ನೇ ಮನೆಯ ಬಾಗಿಲಿಗೆ ಬಂದು ನಿಂತನು. ಮೊದಲು ಇದೇ ಮನೆಯಲ್ಲಿ 'ವಿಧಿ ವಿಲಾಸ' ಹೋಟೇಲಿದ್ದುದು. ಆದರೆ ಈಗ ಹೋಟೇಲಿಲ್ಲವೆಂದೂ, ಅದರಲ್ಲಿ ಶ್ರೀನಿವಾಸರಾಯರ ಬಿಡಾರ ವಿರುವುದೆಂದೂ ಅಣ್ಣಪ್ಪನಿಗೆ ತಿಳಿದಿಲ್ಲ.

ಅಣ್ಣಪ್ಪನು ಬಾಗಿಲ ಬಳಿಗೆ ಬಂದು 'ವಿಧಿ ವಿಲಾಸ'ವೆಂಬ ಬೋರ್ಡು ಇದೆಯೋ ಎಂದು ಕತ್ತೆತ್ತಿ ನೋಡಿದನು, ಇಲ್ಲ. ಸಂಶಯವಾಯಿತು. ಸುತ್ತುಮುತ್ತಲಿನ ಅಂಗಡಿಗಳನ್ನು ನೋಡಿದನು. ಪತ್ರಿಕೆಗಳಲ್ಲಿ 'ಲನೇ ಬೀದಿಯ ೧೫ನೇ ಮನೆ' ಎಂದು ಬರೆದಿದ್ದುದನ್ನು ಜ್ಞಾಪಕಕ್ಕೆ ತಂದುಕೊಂಡು, ಆ ಮನೆಯೇ ಹೌದೆಂದು ಗುರುತಿಸಿಕೊಂಡನು. ಆದರೆ 'ಹೋಟೇಲಿನ ಬೋರ್ಡಿಲ್ಲವಲ್ಲಾ!' ಎಂಬ ಯೋಚನೆಯು ಆತನ ತಲೆಯನ್ನು ತಿನ್ನಲಾರಂಭಿಸಿತು. ಒಳಗೆ ಮೇಜು ಕುರ್ಚಿಗಳೂ, ಕಪಾಟುಗಳೂ, ಅದರಲ್ಲಿ ಗ್ಲಾಸುಗಳೂ ಇರುವುದನ್ನು ಕಂಡು, ದೀಪಾವಳಿಯ ಸಮಯವಾದುದರಿಂದ, ಬೋರ್ಡನ್ನು 'ರಿಪೇರಿ'ಗಾಗಿ ತೆಗೆದಿರಬಹುದೆಂದು ತರ್ಕಿಸಿ ನೆಟ್ಟಗೆ ಒಳಹೊಕ್ಕನು. ಹೋಟೇಲು ಹೋಗಿ ತಿಂಗಳೆರಡಾಗಿದ್ದರೂ ಮೊನ್ನಿನ ತನಕ ಪತ್ರಿಕೆಗಳಲ್ಲಿ 'ವಿಧಿ ವಿಲಾಸ'ದ ಜಾಹೀರಾತು ಇದ್ದುದರಿಂದ ಹೋಟೇಲಿಲ್ಲವೆಂದು ಅಣ್ಣಪ್ಪನಾದರೂ ಏಕೆ ಯೋಚಿಸುವನು?

ಶ್ರೀನಿವಾಸರಾಯರು ಆ ಕಟ್ಟೋಣವನ್ನು ಬಾಡಿಗೆಗೆ ವಹಿಸಿಕೊಂಡ ಮೇಲೆ ಎದುರಿನ ಚಾವಡಿಯಲ್ಲಿ ಕುರ್ಚಿ, ಮೇಜು, ಕಪಾಟುಗಳನ್ನು ಕ್ರಮವಾಗಿರಿಸಿದ್ದರು. ಅದರೊತ್ತಿಗಿರುವ ಕೋಣೆಯಲ್ಲಿ ಅಡಿಗೆ-ಪಡಿಗೆ ತಯಾರಾಗುತ್ತಿತ್ತು. ಆ ಪಾಕಶಾಲೆಯಿಂದೇಳುವ ಹೊಗೆಯನ್ನು ಕಂಡ ಮೇಲಂತು ಕಾಫಿ ಹೊಟೇಲೆಂದು ಅಣ್ಣಪ್ಪನಿಗೆ ನಿಷ್ಕರ್ಷೆಯಾಯಿತು.

ಹೀಗೆಲ್ಲಾ ಯೋಚಿಸಿ ಕಡೆಗೆ ಅಣ್ಣಪ್ಪ ಪಂಡಿತನು ಒಳಗೆ ಹೋಗಿ, ಒಂದು ಆಸನದಲ್ಲಿ ಆಸೀನನಾದನು. ಮತ್ತು ಹೋಟೇಲು ಮಾಣಿಯ ಮಾರ್ಗ ಪ್ರತೀಕ್ಷೆಮಾಡತೊಡಗಿದನು ಬಾಗಿಲ ಬಳಿ ಸದ್ದಾದುದನ್ನು ಕೇಳಿ ಮಾಸ್ತರರ ಮಗಳು ಸುಕನ್ಯೆಯು ಒಳಗಿಂದ ಹೊರಗೆ ಬಂದಳು. ಆಶ್ಚರ್ಯವಾಯಿತು. ಅಪರಿಚಿತ ವ್ಯಕ್ತಿ; ಇವನಾರೆಂದು ಆ ಬಾಲೆಗೆ ತಿಳಿಯದಾಯಿತು. ಮನೆಯಲ್ಲಿ ಮಾಸ್ತರರಿರಲಿಲ್ಲ. ಆದರೆ ಸುಕನ್ಯೆಯು ಸಾಮಾನ್ಯಳಿರಲಿಲ್ಲ. ಧೈರ್ಯದಿಂದ ಅಣ್ಣಪ್ಪನೊಡನೆ "ಏನು ಬೇಕು?" ಎಂದು ಕೇಳಿದಳು. ಹುಡುಗಿ ಕೇಳಿದುದು ಏಕಾಗಿ ಬಂದಿರಿ ಎಂಬ ಅರ್ಥದಿಂದ. ಆದರೆ ಹುಡುಗಿಯ ಸೌಂದರ್ಯಕ್ಕೆ ಬೆರಗಾಗಿದ್ದ ಅಣ್ಣಪ್ಪನು ಮಾತ್ರ ಹೋಟೇಲಿನಲ್ಲಿ ಕೇಳುವಂತೆ "ಏನು ತಿಂಡಿ ಬೇಕು" ಎಂದು ಕೇಳಿದುದೆಂದು ಭಾವಿಸಿದನು. ಅಣ್ಣಪ್ಪನು ಅಪ್ಪಳಿಸಲ್ಪಟ್ಟವನಂತೆ ಬೆರಗಾಗಿ ಮನಸ್ಸಿನಲ್ಲೇ "ಇದೇನು? ನವನಾಗರಿಕತನದ ಪರಮಾವಧಿಯೇ! ಅಲ್ಲದಿದ್ದರೆ ಹರೆಯದ ಹುಡುಗಿಯನ್ನು 'ಸಪ್ಲೈ'ಗಾಗಿ ಹೋಟೇಲಿನಲ್ಲಿ ಇಡುವರೇ!" ಎನ್ನುತ್ತಾ ಹುಡುಗಿಯೊಡನೆ "ಒಂದು ಪ್ಲೇಟ್ ಫ್ರುಟ್‌ಸಲದ್, ಒಂದು ಪ್ಲೇಟ್ ಬಾದಾಮಿ ಹಲ್ವಾವನ್ನೂ, ಒಂದು ಕಪ್ ಟೀಯನ್ನು ತಾ" ಎಂದು ಆಜ್ಞೆಮಾಡಿ ಆಕೆಯ ಚೆಲುವನ್ನು ಕಣ್ಣುಗಳಿಂದ ಹೀರಲಾರಂಭಿಸಿದನು.

ಹುಡುಗಿಗೆ ಈ ಮಾತುಗಳನ್ನು ಕೇಳಿ ಸಿಡಿಲು ಬಡಿದಂತಾಯಿತು. ಪರಿಚಿತ ವ್ಯಕ್ತಿಬಂದು, ಹಲ್ವಾ, ಟೀ ತರಹೇಳುವುದೆಂದರೇನೆಂದು

ಯೋಚಿಸಿ, ಚಿಟ್ಟನೆ ಚೀರಿ, ಒಳಗೋಡಿದಳು. ಒಳಗೆ ಹೋದವಳೆ ತಾಯಿಗೆ ಎಲ್ಲವನ್ನೂ ತಿಳಿಸಿದಳು. ಅಣ್ಣಾಪ್ಪನಿಗೆ ಮಾತ್ರ ಇದು ವಿಚಿತ್ರ ವೆನಿಸಿತು. ಸುಕನ್ಯೆಯ ತಾಯಿ ಕಾವೇರಮ್ಮನು ಸೆರಗನ್ನು ಸರಿಪಡಿಸಿ ಕೊಳ್ಳುತ್ತಾ, ಹೊರಗೆ ಬಂದು, "ನೀವೇನು ಹೋಟೇಲೆಂದು ಬಂದು ಮೋಸ ಹೋದಿರೇ?" ಎಂದು ವಿನಯದಿಂದ ನುಡಿದಳು.

ಹೋಟೇಲಲ್ಲವೆಂಬ ನುಡಿ ಕಿವಿಗೆ ಬಿದ್ದೊಡನೆ, ಅಣ್ಣಾಪ್ಪನಿಗೆ ಸಹಿಸ ಲಾರದಷ್ಟು ನಾಚಿಕೆಯಾಯಿತು. ವ್ಯಥೆಯೂ ಹೆಚ್ಚಾಯಿತು. ತತ್ತ ರಿಸುವ ಧ್ವನಿಯಿಂದ "ವಿ-ಧಿ-ವಿ-ಲಾ-ಸ-ಹೋ-ಟೇ-ಲು-ಇ-ದ- ಲ್ಲ-ವೇ-?" ಎಂದು ಕಷ್ಟದಿಂದ ನುಡಿದನು. ಸುಕನ್ಯೆಯು ಈ ವಿಚಿತ್ರ ಪ್ರಕರಣವನ್ನು ಬಾಗಿಲ ಸಂದಿನಲ್ಲೇ ಇಣಿಕಿ ನೋಡುತ್ತಿದ್ದಳು.

ಕಾವೇರಮ್ಮನು ಮೃದುನುಡಿಗಳಿಂದ "ಸಭ್ಯರೇ, ನಿಮ್ಮ ತಪ್ಪಿಲ್ಲ. 'ವಿಧಿವಿಲಾಸ'ವೆಂಬ ಹೋಟೇಲು ಇಲ್ಲಿತ್ತೆಂಬುದೇನೋ ನಿಜ. ಆದರೆ ಕೆಲವು ತಿಂಗಳ ಹಿಂದೆ ಹೋಟೇಲಿನ ಮೆನೇಜರರು ಅಕಾಲ ಮರಣಕ್ಕೆ ತುತ್ತಾಗಿ, ಹೋಟೇಲು ಬಿದ್ದುಹೋಯಿತು. ಆ ಮೇಲೆ ಈ ಕಟ್ಟೋ ಣವನ್ನು ನಾವು ಬಾಡಿಗೆಗೆ ಪಡಕೊಂಡು, ಮನೆಯಾಗಿ ಉಪಯೋಗಿಸು ತ್ತಿರುವೆವು. ತಿಳಿಯಿತೇ" ಎಂದಳು.

ಈ ಮಾತುಗಳನ್ನು ಕೇಳಿದ ಅಣ್ಣಾಪ್ಪನು ಮೃತಪ್ರಾಯ ನಾಗಿ, ಮಾತಾಡಲಾರದೆ ಬಹಳ ಕಷ್ಟದಿಂದ "ತಾಯಿ, ಬಹಳ ಉಪಕಾರವಾಯಿತು, ಹೋಗಿ ಬರಲೇ?" ಎಂದು ಮೆತ್ತಗೆ ಹೊರಟು ಬೀದಿಗಿಳಿದನು.

ಪಾಠಕ ಮಹಾಶಯ, 'ವಿಧಿವಿಲಾಸ'ದ ವಿಧಿಯು ಈ ರೀತಿಯಾ ದುದು ಆಶ್ಚರ್ಯವಲ್ಲವೇ?



# ೩. ಬಾಣಾವರದ ಜಮೀನ್ದಾರ

ಭೂಮಿಯು ಬೇಸಿಗೆಯ ಬೇಗೆಯಿಂದ ಬೇಯುತ್ತಿದ್ದ ಆದೊಂದು ದುರ್ದಿನ. ಸೂರ್ಯನು ನಡುನೆತ್ತಿಯ ಮೇಲೆ ನಿಂತು, ಮಾನವ ಪ್ರಪಂಚವನ್ನು ಸುಟ್ಟುಬಿಡಲು ಬದ್ಧಕಂಕಣನಾಗಿರುವನೋ ಎಂಬಂತೆ ಕಾಣುತಿದ್ದನು. ಭೂಮಿಯು ಕಾದ ಕಾವಲಿಯಂತಾಗಿತ್ತು. ಪಕ್ಷಿಗಳೆಲ್ಲವೂ ಕಲಕಲ ರವವನ್ನು ನಿಲ್ಲಿಸಿ, ಮರದೆಡೆಗಳಲ್ಲಿ ಗಾಳಿಗೆ ಮೈಯೊಡ್ಡಿ ಕುಳಿತಿದ್ದವು. ಪ್ರಾಣಿಗಳೆಲ್ಲವೂ ಮೇವನ್ನು ಬಿಟ್ಟು ನೆರಳನ್ನಾಶ್ರಯಿಸಿದ್ದವು. ಮನುಷ್ಯರು ತಮ್ಮ ಪಾಪದ ಪ್ರಾಯಶ್ಚಿತ್ತಕ್ಕಾಗಿ ಪರಮಾತ್ಮನೊಡನೆ ಬೇಡಿಕೊಳ್ಳುತ್ತಿರುವರೋ ಎಂಬಂತೆ ಉಸಿರೆತ್ತದೆ ತಮ್ಮ ತಮ್ಮ ಮನೆಗಳಲ್ಲಿ ಕುಳಿತಿದ್ದರು. ಭಗವಾನ್ ಭಾಸ್ಕರನು, ತಾನೀಗ ಏಕಚಕ್ರಾಧಿಪತಿ ಎಂಬ ಹೆಮ್ಮೆಯಿಂದ, ಇನ್ನಾರಾದರೂ ಪ್ರಪಂಚದಲ್ಲಿ ಸುಳಿದಾಡುತ್ತಿರುವರೋ ಎಂದು ಕಿರಣಗಳೆಂಬ ತನ್ನ ಕಣ್ಣುಗಳಿಂದ ಇಣಿಕಿ ನೋಡುತ್ತಿದ್ದನು.

ಬೇಸಿಗೆಯ ದುರ್ದಿನವಾದರೂ ವೆಂಕಟರಾಯರಲ್ಲಿ ಅಂದು ವಿಶೇಷ ಭೋಜನವಿತ್ತಾದ್ದರಿಂದ ವಿಪ್ರವೃಂದಕ್ಕೆಲ್ಲಾ ತುಂಬಾ ಆನಂದ. ನಾಲ್ಕೂರುಗಳಿಂದ ಬ್ರಾಹ್ಮಣರು ಹಿಂಡುಗಟ್ಟಿ ಬಂದಿದ್ದರು. ಭೋಜನದಾಶೆಗಾಗಿ ಬಂದವರು ಕೆಲವರು; ದಾನದಾಶೆಗಾಗಿ ಬಂದವರು ಕೆಲವರು; ದಕ್ಷಿಣೆಗೆಂದು ಬಂದವರು ಕೆಲವರು; ಮಿತ್ರರಲ್ಲಿಗೆ ಹೋಗದೆ ನಿರ್ವಾಹವಿಲ್ಲವೆಂದು ಬಂದವರು ಮತ್ತೆ ಕೆಲವರು. ಎಲ್ಲರೂ ಚಪ್ಪರದಲ್ಲಿ ಕುಳಿತಿದ್ದರು. ಊಟಕ್ಕೆ ಇನ್ನೂ ಸ್ವಲ್ಪ ವಿಳಂಬವಿದ್ದುದರಿಂದ

ಕೆಲವರು ಇಸ್ಪೀಟಾಟದಲ್ಲೂ, ಕೆಲವರು ಊರೂರುಗಳ ಸಮಾಚಾರ ದಲ್ಲೂ, ಕೆಲವರು ಹರಟೆ ಹೊಡೆಯುವುದರಲ್ಲೂ, ಇನ್ನು ಕೆಲವರು ವೀಳ್ಯದಲೆ ಜಗಿಯುವುದರಲ್ಲೂ, ಮತ್ತೆ ಕೆಲವರು ಅಡಿಗೆ ಮನೆಯಿಂದ ಚಪ್ಪರಕ್ಕೂ ಚಪ್ಪರದಿಂದ ಅಡಿಗೆಮನೆಗೂ ಅಡ್ಡಾಡುವುದರಲ್ಲೂ ಮಗ್ನರಾಗಿದ್ದರು.

ಆಗ ತೇಜಸ್ವಿಯಾದ ಅಪರಿಚಿತನೊಬ್ಬನು ಗಂಟು-ಗದಡಿ ಗಳೊಡನೆ ಹೆಬ್ಬಾಗಿಲು ಮೆಟ್ಟಿ ಒಳಗೆ ಬಂದನು. ಅಥಿತಿಗೆ ತಕ್ಕ ಉಪಚಾರ ನಡೆಯಿತು. ಆಗ ಪದ್ಮನಾಭಯ್ಯನವರು ಆ ಅಪರಿಚಿತ ವ್ಯಕ್ತಿಯೆಡೆಗೆ ಬಂದು "ಸ್ವಾಮಿ, ಯಾವ ಕಡೆಯಿಂದ ತಮ್ಮಾಗಮನ ವಾಯಿತು? ತಮ್ಮ ಹುಟ್ಟೂರು ಯಾವುದು?" ಎಂದು ಪ್ರಶ್ನಿಸಿದರು.

"ಮೈಸೂರು ಸಂಸ್ಥಾನದ ಬಾಣಾವರ ಎಂಬ ಊರೇ ನನ್ನ ಹುಟ್ಟೂರು. ನಾನೀಗ ಮಂಗಳೂರಿಂದ ಬಂದೆನು" ಎಂದು ಸಿಟ್ಟು ಸಿರಿಸಿಂದೊಡಗೂಡಿದ ಉತ್ತರವು ಆ ವ್ಯಕ್ತಿಯಿಂದ ಬಂತು.

ಪದ್ಮನಾಭಯ್ಯನವರು ಬೋಳೇ ಸ್ವಭಾವದವರು. ಯಾವ ನೊಬ್ಬನನ್ನು ಕಂಡರೂ ಅವರೊಡನೆ ಮಾತುಕತೆ ನಡೆಸಿ, ಅವರ ಜೀವನ ಚರಿತ್ರೆಯನ್ನೆಲ್ಲಾ ಸಂಗ್ರಹಿಸುವಂತಹ ಗುಣದವರು. ಅಪರಿಚಿತ ನಾದರೋ ಇಪ್ಪತ್ತನೆಯ ಶತಮಾನಕ್ಕೊಪ್ಪುವಂತೆ ಜುಟ್ಟು ಕತ್ತರಿಸಿ ಬೈತಲೆ ಬಿಡಿಸಿದ್ದನು. ಮೈಸೂರು ಸ್ಯಾಂಡಲ್ ಸೋಪಿನಿಂದ ಅವನ ಮೈಯು ಗಮಗಮಿಸುತಿತ್ತು. ಅಲ್ಲದೆ ಅವನೊಡನೆ ಬಾಚಣಿಗೆ, ಟೂತ್ ಪೇಸ್ಟ್, ಸಾಬೂನು ಮತ್ತು ಇನ್ನೇನೇನೋ ಸಾಧನಗಳಿದ್ದುವು. ಸ್ವಚ್ಛವಾದ ಧೋತರವು ಅವನಂಗವನ್ನು ಮುಚ್ಚಿಕೊಂಡಿತ್ತು. ನವ ನಾಗರಿಕತೆಯ ತುದಿ ಮೆಟ್ಟಲಲ್ಲಿ ಮೆರೆಯುತ್ತಿರುವ ಆತನನ್ನು ಯಾರೂ ಕುಲೀನನೆನ್ನದಿರರು. ಅಪರಿಚಿತನ ಮಾತು ಕೇಳಿ, "ರಾಯರೇ, ನೀವು ಯಾವ ಕಾರ್ಯನಿಮಿತ್ತ ಈ ಕಡೆ ದಯಮಾಡಿಸಿದಿರಿ? ತಮ್ಮ ನಾಮ

ಧೇಯವೇನು? ಏಕಾಗಿ ನಿಟ್ಟುಸಿರಿಡುವಿರಿ? ಯಾಕಾಗಿ ತಮ್ಮ ಮುಖವು ಕಂದಿದೆ?" ಎಂದು ಪದ್ಮನಾಭಯ್ಯನವರು ಆತುರತೆಯಿಂದ ಕೇಳಿದರು.

ಅಪರಿಚಿತನು "ಸ್ವಾಮಿ, ನನಗೊಂದಿಷ್ಟು ಅನ್ನ ದೊರೆತರೆ ಸಾಕು. ನನ್ನ ಅವಸ್ಥೆಯನ್ನು ನಿಮ್ಮೊಡನೆ ಹೇಳಿದುದರಿಂದ ಸಿಗುವ ಲಾಭವಾದರೂ ಏನು?" ಎಂದು ಬೇಸರದಿಂದ ನುಡಿದನು. ಇಂತಹ ಮನುಷ್ಯನಿಗೆ ಅದಾವ ಆಪತ್ತು ಬಂದಿದೆ ಎಂದು ತಿಳಿವ ಲವಲವಿಕೆ ಯಿಂದ ಪದ್ಮನಾಭಯ್ಯನವರು "ಆಗಲಿ, ಮಾಸ್ತರೇ, ಹೇಳಿದುದರಲ್ಲಿ ಏನು ತಪ್ಪು?" ಎಂದು ಆತನನ್ನು ಪೀಡಿಸತೊಡಗಿದರು. ಕಡೆಗೆ ಆ ಅಪರಿಚಿತ ಮನುಷ್ಯನು ದಾಕ್ಷಿಣ್ಯಕ್ಕೆ ಕಟ್ಟುಬಿದ್ದು, ಗಾಯಕನು ಗಾಯ ನವಾರಂಭಿಸುವ ಮೊದಲು ಗಂಟಲು ಸರಿಮಾಡಿಕೊಳ್ಳುವಂತೆ ಕಂಠ ವನ್ನು ಸರಿಪಡಿಸಿಕೊಂಡು, ತನ್ನ ಜನ್ಮ ಚರಿತ್ರೆಯ ಭಂಡಾರವನ್ನು ಬಿಚ್ಚಿದನು.

"ಅಯ್ಯಾ, ನಾನಾದರೋ ಸಾಮಾನ್ಯ ಕುಲದಲ್ಲಿ ಹುಟ್ಟಿದವನಲ್ಲ. ಕುಲೀನ ಕುಟುಂಬದಲ್ಲಿ ಜನ್ಮತಳೆದೆನು. ಆದರೆ ಕೆಲವು ವರ್ಷಗಳಿಂದ ಪಿತೃವಿಹೀನನಾಗಿ ಎಲ್ಲಾ ಕಾರ್ಯಭಾರವನ್ನು ನಾನೇ ನಡೆಸುತ್ತಿರು ವೆನು. ವರ್ಷದ ಆದಾಯವೆಂದರೆ ಕಡಿಮೆಯಿಲ್ಲ. ಹತ್ತು ಖಂಡಿ ಅಡಿಕೆ ಗೇಣಿಬರುವುದು. ಮೂರು ಅಕ್ಕಿ ಮಿಲ್ಲುಗಳು ನನ್ನ ಸ್ವಂತದ್ದಿವೆ. ಅವುಗಳಿಂದ ವರ್ಷ ಒಂದಕ್ಕೆ ಕಡಿಮೆಯೆಂದರೆ ಮೂರು ಸಾವಿರ ರೂಪಾಯಿಗಳ ಲಾಭಬರುವುದು. ಬಾಣಾವರದ ಅರ್ಧಾಂಶ ಆಸ್ತಿಗೆ ನಾನೇ ಸ್ವಾಮಿಯು! ವರ್ಷ ಒಂದರ ಐದು ಸಾವಿರ ರೂಪಾಯಿ ಕಂದಾಯ ತೆರುವೆನು. ನನ್ನನ್ನು ಜನರು ದಾಸರಾವ್ ಎಂದೂ, ಬಾಣಾವರದ ಭಾರೀ ಜಮೀನ್ದಾರನೆಂದೂ ಸಂಬೋಧಿಸುವರು" ಎಂದನು. ಈ ಮಾತುಗಳನ್ನು ಕೇಳಿದವರೆಲ್ಲರೂ ಆತನನ್ನು 'ಮಹಾತ್ಮ' ನೆಂದೇ ಒಪ್ಪಿಕೊಂಡರು.

ಶಿವರಾಮರಾಯರು ಆತನ ಐಶ್ವರ್ಯಕ್ಕೆ ಬೆರಗಾಗಿ ಹೋದರು. ಶೀನಪ್ಪನವರು ಬೆರಳು ಕಚ್ಚಿ ಕೊಂಡರು. ಪದ್ಮನಾಭಯ್ಯನವರು ಮಾತ್ರ "ರಾಯರೇ, ಹೂಂ ಹೇಳಿರಿ" ಎಂದು ತಮ್ಮ ಕಿವಿಯನ್ನು ಇನ್ನಷ್ಟು ಅರಳಿಸಿಕೊಂಡರು. ಎಲ್ಲರಿಗೂ ಈ ಚರಿತ್ರೆ ಕೇಳಿ ಉಂಡಷ್ಟು ಆನಂದವಾಯಿತು.

ದಾಸರಾಯನು ಬಿಸಿಯುಸಿರುಗರೆಯುತ್ತಾ "ಸಭ್ಯರೇ, ವಿಧಿಯ ಮಾಟಕ್ಕೆ ಸರ್ವರೂ ಕತ್ತು ತಗ್ಗಿಸಬೇಕಷ್ಟೆ? ಅಂತೆಯೇ ಮಹಾತ್ಮಾ ಗಾಂಧಿಯಿಂದಲೂ "ತೋಟದ ನಗರ"ವೆಂಬ ಬಿರುದು ಪಡೆದ ಮಂಗಳೂರನ್ನೊಮ್ಮೆ ಕಾಣಬೇಕೆಂಬಾಶೆಯು ನನ್ನನ್ನು ಬಲವತ್ತರವಾಗಿ ಪೀಡಿಸಲು, ಮೊನ್ನೆ ಸೆಟ್ಟಗೆ ಮಂಗಳೂರಿಗೆ ಹೊರಟು ಬಂದೆನು. ನಿನ್ನೆ ತನಕ ನಗರವೆಲ್ಲಾ ಸುತ್ತಾಡಿ, ನೋಡತಕ್ಕ ನೋಟಗಳನ್ನೆಲ್ಲಾ ನೋಡಿದೆನು. ನಮ್ಮೂರು ಘಟ್ಟ ಸೀಮೆಯಲ್ಲಿದ್ದು ಸಮುದ್ರವನ್ನು ಇದುವರೆಗೆ ಕಾಣದಿದ್ದುದರಿಂದ ಒಂದು ಬಾರಿ ಸಮುದ್ರ ಸ್ನಾನಮಾಡಬೇಕೆಂಬುದಾಗಿ ಯೋಚಿಸಿದೆನು. ಅದಕ್ಕಾಗಿ ಒಡನೆ ರೈಲು ಹತ್ತಿ ಉಳ್ಳಾಲಕ್ಕೆ ಹೋಗಿ, ಸಮುದ್ರದ ದಂಡೆಯ ಮರಳಲ್ಲಿ ನನ್ನ ವಸ್ತು ಒಡವೆಗಳನ್ನಿಟ್ಟು ಸ್ನಾನಕ್ಕಿಳಿದೆನು. ಸ್ನಾನಾನಂತರ ಬಂದು ನೋಡಲಾಗಿ ನಾನಿಟ್ಟ ಒಂದು ವಸ್ತುವೂ ಅಲ್ಲಿರಲಿಲ್ಲ. ಯಾರೋ ಅಪಹರಿಸಿಬಿಟ್ಟಿದ್ದರು. ಕಾಣೆಯಾದ ವಸ್ತುಗಳೆಂದರೆ, ಸಾಧಾರಣ ೭೫ರೂಪಾಯಿ ಕ್ರಯಬಾಳುವ "ವೆಸ್ಟ್ ಎಂಡ್ ವಾಚ್ ಕಂಪೆನಿ"ಯ ಒಂದು ರಿಸ್ಟು ವಾಚು; ಒಂದು ನೂರು ರೂಪಾಯಿ ಇದ್ದ 'ಪಾಕೇಟು' ಒಂದು; ವಜ್ರದುಂಗುರ ಒಂದು; ಮತ್ತು ಅಂಗಿ ವಸ್ತ್ರಗಳು. ಹೀಗಾಗಿ ಈಗ ಕಾಸಿಗೆ ಗತಿ ಇಲ್ಲದವನಾಗಿರುವೆನು. ಮತ್ತೆ ಅಲ್ಲೇ ವಿಹಾರು ಹಿಡಿಯುತ್ತಿದ್ದ ಪ್ರತಿಯೊಬ್ಬನನ್ನೂ ಕೇಳಲಾಗಿ 'ನಾವರಿಯೆವೆಂ'ಬ ಪದವೇ ಎಲ್ಲರಿಂದಲೂ ಕೇಳಬಂತು. ಮುಂದೆ ಪೈಗೂ ದಾರಿಗಾಣದೆ ಇದೇ ದಾರಿಯಾಗಿ ಬರುತ್ತಿರಲು, ಹಸಿವೆಯನ್ನು ತಾಳಲಾರದೆ ಇಲ್ಲಿಗೆ

ಬಂದೆನು. ಧನಿಕನಾಗಿದ್ದು ಈಗ ಪರರೊಡನೆ ಬೇಡುವುದೆಂದರೆ ಸರ್ವಥಾ ಸನ್ನಿಂದಾಗದು. ಇದಕ್ಕೆ ಪರಮಾತ್ಮನ ಆಟವೆಂದಲ್ಲದೆ, ಬೇರೇನು ಹೇಳಲು ಬರುವುದು? ಮುಂದೆ ಹೇಗೆ ಊರು ಸೇರಲಿ ಎಂಬ ಚಿಂತೆಯೇ ನನ್ನನ್ನು ಆವರಿಸಿ ಬಿಟ್ಟಿದೆ. ಬೇಕಾದವರಾಗಲೀ, ಸ್ನೇಹಿತ ರಾಗಲೀ, ಇಲ್ಲಿ ನನಗೆ ಯಾರೂ ಇಲ್ಲ." ಎಂದು ದಾಸರಾಯನು ತನ್ನ ಕಥೆಯನ್ನು ಹೇಳಿ ಮುಗಿಸಿದನು.

ಈ ಮಾತು ಕೇಳಿ ಎಲ್ಲರ ಎದೆಯೂ ಕರಗಿತು. ಆಗ ಗೋವಿಂದ ರಾಯರು "ಈ ಅವಸ್ಥೆ ನಮ್ಮ ವೈರಿಗಳಿಗೂ ಬರಬಾರದು" ಎಂದು ಉದ್ಗಾರ ತೆಗೆಯುತ್ತಾ, ತನ್ನೊಡನೆ ಎಲ್ಲಿಯಾದರೂ ಕಾಸು ಕೇಳಬಹು ದೆಂದು ಮೆತ್ತಗೆ ಅಲ್ಲಿಂದೆದ್ದು ದೂರಹೋಗಿ ಕುಳಿತರು. ಶೀನಪ್ಪನವರು "ಧನಿಕನಾಗಿ ಮೆರೆಯುತ್ತಿದ್ದವನಿಗೆ ಇದಕ್ಕಿಂತಲೂ ಹೆಚ್ಚಿನ ಅಪಮಾನ ವಿರುವುದೇ?" ಎನ್ನುತ್ತಾ ಮೆಲ್ಲಮೆಲ್ಲನೆ ಹಿಂದೆ ಸರಿದು ಕುಳಿತರು. ನರ ಸಿಂಹನವರು ತಲೆಯಾಡಿಸಿಕೊಂಡು, ಹೊರಸೂಸುವ ತಾಂಬೂಲವನ್ನು ನಾಲಿಗೆಯಿಂದ ಒಳದೂಡಿಕೊಳ್ಳುತ್ತಾ, "ಈ ರೀತಿಯ ದಗಾಖೋರರಿಗೆ ಅದಾವನರಕವು ಸಿದ್ಧವಾಗಿರುವುದೋ?" ಎಂದು ಸ್ವರವೆತ್ತಿದರು. "ನಾನಾಗಿರುತ್ತಿದ್ದರೆ ಆ ಬೆಸ್ತರನ್ನೆಲ್ಲಾ ಪರೀಕ್ಷಿಸಿ ಗಂಟು ಪಡೆಯು ತ್ತಿದ್ದೆನು" ಎಂದು ಕಿಟ್ಟಣ್ಣನವರು ಮೀಸೆ ಹುರಿಮಾಡಿದರು. "ಹೌದು, ಇಂತಹ ಮಹನೀಯರಿಂದ ಆ ಕೆಲಸವಾದೀತೇ?" ಎಂದು ಟೀಕಿಸಿದರು ಗೋಪಣ್ಣನವರು.

ಅಷ್ಟರಲ್ಲಿ ಭೋಜನಕ್ಕೆ ಅಣಿಯಾಯಿತು. ಎಲ್ಲರೂ ಇದೇ ವಿಷ ಯವನ್ನು ಚರ್ಚಿಸುತ್ತಾ ಕೈಬಾಯಿಗಳ ಜಗಳಕ್ಕೆ (ಊಟಕ್ಕೆ) ಪ್ರಾರಂಭಿ ಸಿದರು. ಊಟ ಮುಗಿದು, ತಾಂಬೂಲ ಜಗಿಯುವ ತನಕ, 'ಬಾಣಾ ವರದ ಜಮೀನ್ದಾರ' ದಾಸರಾಯನ ವಿಷಯದ ಟೀಕೆ—ಟಿಪ್ಪಣಿಗಳಾ ದುವು. ಆದರೆ ಬಾಯಿ ತುಂಬಾ ಪಂಚಬಳ್ಳಿ ಎಲೆಯನ್ನು ತುಂಬಿಸಿದ

ಮೇಲೆ ಮಾತಾಡಲು ತೊಡಕಾದ್ದರಿಂದ ಆ ವಿಷಯವು ಅಲ್ಲಿಗೇ ನಿಲ್ಲಿಸಲ್ಪಟ್ಟಿತು. ಎಲ್ಲರೂ ಹೊರಟು ಹೋದರು.

ಎಲ್ಲರ ಮನಸ್ಸು ಮಾತ್ರ ಕರಗಿದುದಲ್ಲದೆ, ದೀನಾವಸ್ಥೆಯ ದಾಸರಾಯನಿಗೆ ಹಣಕೊಟ್ಟು ಸಹಕರಿಸಬೇಕೆಂಬ ಯೋಚನೆ ಮಾತ್ರ ಯಾರ ತಲೆಯಲ್ಲೂ ಉಂಟಾಗಿ ಮಿದುಳು ಕರಗಲಿಲ್ಲ. ದಾಸರಾಯನೂ ಮುಖ ಬಾಡಿಸಿಕೊಂಡು ತಾನೂ ಹೊರಡಲನುವಾದನು. ಯಾರಾದರೂ ಸಹಾಯಮಾಡುವರೆಂಬ ಭರವಸೆ ಅವನಿಗಾಗಲಿಲ್ಲ.

ಆಗ ಮನೆ ಯಜಮಾನ ವೆಂಕಟರಾಯರು ಆತನನ್ನು ನಿಲ್ಲಹೇಳಿದರು. ಕಡೆಗೆ ವೆಂಕಟರಾಯ, ಪದ್ಮನಾಭಯ್ಯ, ಶಿವರಾಮರಾಯ ಇವರ ಸದಸ್ಯತನದಲ್ಲಿ ಒಂದು 'ರೌಂಡ್ ಟೇಬಲ್ ಕಾನ್ಫರೆನ್ಸು' ನಡೆದು ತಮ್ಮೊಳಗೆ ಏನನ್ನೋ ತೀರ್ಮಾನಿಸಿಕೊಂಡು, ಹದಿನೈದು ರೂಪಾಯಿಗಳ ಥೈಲಿಯೊಂದನ್ನು ದಾಸರಾಯನಿಗರ್ಪಿಸಿದರು.

"ರಾಯರೇ, ನಿಮ್ಮ ಸ್ಥಿತಿನೋಡಿ ಬೇಸರ ಪಟ್ಟು, ಈ ಹಣವನ್ನು ಕೊಟ್ಟಿರುವೆವು. ಊರಿಗೆ ಹೋಗಿ ನಮಗೆ ಕಳುಹಿಸಿ ಕೊಡಿರಿ" ಎಂದು ವೆಂಕಟರಾಯರ ಅಂಬೋಣ. ದಾಸರಾಯನು ದಾಕ್ಷಿಣ್ಯ ತೋರ್ಪಡಿಸುತ್ತಾ, ಒಲ್ಲೆನೆನ್ನುತ್ತಾ, ಕಡೆಗೆ ಹಣವನ್ನು ಕಿಸೆಯೊಳಗೆ ಸೇರಿಸಿಯೇ ಬಿಟ್ಟನು. ಮತ್ತು "ದಾತೃಗಳೇ, ನಾನು ಊರು ಮನೆ ಸೇರಿದೊಡನೆ ನಿಮ್ಮ ಹಣವನ್ನೂ, ಅದರ ಬಡ್ಡಿಯನ್ನೂ ಕಳುಹಿಸುವೆನು. ಮರಣ ಪರ್ಯಂತ ನಿಮ್ಮ ಉಪಕಾರವನ್ನು ಮರೆಯಲಾರೆನು." ಎಂದು ಉಪಚಾರದ ಮಾತುಗಳನ್ನು ಹೇಳುತ್ತಾ, ಅವರ ಅಪ್ಪಣೆ ಪಡೆದು ಹೊರಟು ಹೋದನು.

ದಾಸರಾಯನು ಹೋಗಿ ಆರು ತಿಂಗಳು ಕಳೆದುಹೋಯಿತು. ಊರು ಸೇರಿದೊಡನೆ ಕಳುಹಿಸುವೆನೆಂದಿದ್ದ ಆತನ ಪತ್ತೆಯೇ ಇಲ್ಲ.

ಇವರ ಹಣವೂ ಇಲ್ಲ. 'ಬಾಣಾವರದ ಜಮೀನ್ದಾರ'ನು ಊರು ಸೇರಿದನೋ, ಇಲ್ಲವೋ ಎಂಬುದೇ ಕಷ್ಟದ ಸಮಸ್ಯೆಯಾಯಿತು.

ಆ ಮೇಲೆ ಒಂದು ದಿನ ಪದ್ಮನಾಭಯ್ಯನವರು ಆತನ ವಿಳಾಸಕ್ಕೊಂದು ಪತ್ರಬರೆದರು. ಶಿವರಾಮರಾಯರಿಗೆ ನಿತ್ಯವೂ ಟಪ್ಪಾಲು ಕಟ್ಟೆಗೆ ಹೋಗಿ ಉತ್ತರ ನಿರೀಕ್ಷಿಸುವುದೇ ಕೆಲಸವಾಯಿತು.

ಇವರು ಪತ್ರ ಬರೆದ ಇಪ್ಪತ್ತೊಂದನೇ ದಿನ, ಇವರು ಬರೆದ ಪತ್ರವು 'ಈ ವಿಳಾಸದಾರನು ಇಲ್ಲಿ ಇಲ್ಲವೇ ಇಲ್ಲ' ಎಂದು ಬಾಣಾವರದ 'ಪೋಸ್ಟು ಮೇನ'ನಿಂದ ಬರೆಯಲ್ಪಟ್ಟು ಪದ್ಮನಾಭಯ್ಯನವರಿಗೇ ಬಂದು ತಲಪಿತು.

"ನಮ್ಮನ್ನೂ ಮೋಸಗೊಳಿಸುವಂತಹ ಮೋಸಗಾರರು ಈ ಇಪ್ಪತ್ತನೇ ಶತಮಾನದಲ್ಲಿಯೂ ಹುಟ್ಟಿರುವರೇ!" ಎಂದು ಪದ್ಮನಾಭಯ್ಯ, ಶಿವರಾಮರಾಯರು ಈಗಲೂ ಆಕಳಿಸುತ್ತಿರುವರು.



# ೪. 'ಪ್ರೊಟ್ಟು ವಾಚ್'

ಜಾಹೀರಾತುಗಳನ್ನು ಓದುವುದೆಂದರೆ ವಾಚಪ್ಪನಿಗೆ ಬಹಳ ಆಸೆ. ಸ್ವದೇಶ-ವಿದೇಶಗಳ ವರ್ತಮಾನಗಳನ್ನು ಕಣ್ಣೆತ್ತಿಯೂ ನೋಡುವವನಲ್ಲ. ಆದರೆ ಮಾಸಪತ್ರಿಕೆ, ಪಕ್ಷಪತ್ರಿಕೆ, ವಾರಪತ್ರಿಕೆ, ದಿನಪತ್ರಿಕೆಗಳಲ್ಲಿನ ಜಾಹೀರಾತುಗಳೆಲ್ಲವನ್ನೂ ಕಂಠೋಕ್ತಮಾಡಿಕೊಳ್ಳುವಂತಹನು ವಾಚಪ್ಪನು. ಯಾರಿಗಾದರೂ ಯಾವುದಾದರೊಂದು ವಿಷಯದ ಜಾಹೀರಾತು ನೋಡಬೇಕಾಗಿದ್ದರೆ, "ನ್ಯೂಸ್‌ಪೇಪರ್" ಹುಡುಕುವ ಬೇಸರಪಡಬೇಕಾಗಿಲ್ಲ. ವಾಚಪ್ಪನೊಡನೆ ಕೇಳಿದರೆ ಸರಿ. ಜಾಹೀರಾತಿನ ಸಂಪೂರ್ಣ ವಿಷಯಗಳನ್ನು,— ಹೊಟೇಲಿನವರು ತಿಂಡಿಯ ಹೆಸರುಗಳನ್ನುಚ್ಚರಿಸುವಂತೆ ಪಟಪಟನೆ ಹೇಳಿಬಿಡುವನು. ಆದುಕಾರಣದಿಂದಲೇ ಎಲ್ಲರೂ ಅವನನ್ನು "ಎಡ್ವರ್ಟೈಸ್‌ಮೆಂಟ್ ಪೇಪರ್" ಎಂದು ಕರೆಯುತ್ತಿರುವರು. ಎಲ್ಲರೂ ತನ್ನನ್ನು ಅಂತೆಯೇ ಸಂಬೋಧಿಸಬೇಕೆಂದು ವಾಚಪ್ಪನ ಬಯಕೆ.

ಒಂದು ದಿನ ವಾಚಪ್ಪನು 'ಯಮದೂತ' ವಾರಪತ್ರಿಕೆಯ ಪುಟಗಳನ್ನು ಮಗುಚುತ್ತಿರಲಾಗಿ, ದೊಡ್ಡ ದೊಡ್ಡ ಅಕ್ಷರಗಳಿಂದ ಬರೆದ "ಘಡಿಯಾರ ಬ್ರದರ್ಸ್"ರವರ ಜಾಹೀರಾತು ವಾಚಪ್ಪನ ಕಣ್ಣಿಗೆ ಬಿತ್ತು. ಕನ್ನಡಕವನ್ನು ಸರಿಪಡಿಸಿಕೊಂಡು ಓದತೊಡಗಿದನು. ಅದರಲ್ಲಿ ಈ ರೀತಿಯಾಗಿ ಬರೆದಿತ್ತು:—

ನೋಡಿರಿ! ಓದಿರಿ!! ಪಡಿಯಿರಿ!!!

ನಮ್ಮಲ್ಲಿ ಎಲ್ಲಾ ತರದ ವಾಚುಗಳು ಬಿಕರಿಗೆ ಸಿದ್ಧವಾಗಿವೆ. ಕೇಳಿದಷ್ಟು ಸಮಯ ಗ್ಯಾರಂಟಿ ಕೊಡಲಾಗುವುದು. ಖಾತ್ರಿ ಸಾಮಾನುಗಳು. ವಾಚನ್ನು ಕಲ್ಲಿಗೆ ಹೊಡೆದರೂ ಕೆಡಲಾರದು. ಉತ್ತಮವೆಂದು ಹಲವರು "ಸರ್ಟಿಫಿಕೇಟು" ಕೂಡಾ ಕೊಟ್ಟಿರುವರು. ವಿ. ಪಿ. ಗಾಗಿ ಇಂದೇ ಬರೆಯಿರಿ.

ಪತ್ತೆ:— ಘಡಿಯಾರ ಬ್ರದರ್ಸ್,
ವಾಚು ವ್ಯಾಪಾರಿಗಳು,
ಪಿನ್ನಾ ಬಜಾರ್, ಮಾಳವೂರು.

ವಾಚಪ್ಪನು ಹರ್ಷಾತಿರೇಕದಿಂದ ಉಬ್ಬಿ, ಅದನ್ನು ಐವತ್ತೊಂದು ಜಾರಿ ಓದಿದನು. "ಕಲ್ಲಿಗೆ ಹೊಡೆದರೂ ಹಾಳಾಗದ"ಂದಿರುವುದನ್ನು ಕಂಡು, ಇಂತಹ "ವಾಚ"ನ್ನು ತರಿಸಿ ಪರೀಕ್ಷಿಸಲೇ ಬೇಕೆಂದು ನಿಷ್ಕರ್ಷೆ ಮಾಡಿದನು. ಒಡನೆ "ಉತ್ತಮ ರಿಸ್ಟು ವಾಚು ಒಂದನ್ನು ವಿ. ಪಿ. ಯಾಗಿ ಕಳುಹಿಸಬೇಕೆ"ಂದು "ಘಡಿಯಾರ ಬ್ರದರ್ಸ್"ರವರಿಗೆ ಬರೆದೇ ಬಿಟ್ಟನು. ಕಾಗದವನ್ನು ಟಪ್ಪಾಲು ಪೆಟ್ಟಿಗೆಯ ಹೊಟ್ಟೆಯೊಳಕ್ಕೆ ಸೇರಿಸಿದ ನಂತರವೇ ವಾಚಪ್ಪನ ಮನಸ್ಸು ಸಮಾಧಾನವಾದುದು.

ವಾಚಪ್ಪನು ಪತ್ರಬರೆದ ಒಂಭತ್ತು ದಿನಗಳ ಮೇಲೆ "ಘಡಿಯಾರ ಬ್ರದರ್ಸ್"ರವರಿಂದ ಹತ್ತು ರೂಪಾಯಿ ಎಂಟಾಣೆಗಳಿಗೆ ವಾಚಪ್ಪನ ವಿಳಾಸಕ್ಕೊಂದು ವಿ. ಪಿ. ಪಾರ್ಸೆಲು ಬಂತು. ಕಲ್ಲಿಗೆ ಹೊಡೆದರೂ ಹಾಳಾಗದಂತಹ ವಾಚನ್ನು ಒಮ್ಮೆ ನೋಡಬೇಕೆಂಬಾತುರದಿಂದ ಕಿವಿಯಲ್ಲಿನ ಒಂಟಿಯನ್ನು ಒತ್ತೆಯಿಟ್ಟು ವಾಚಪ್ಪನು ಪಾರ್ಸೆಲನ್ನು ಪಡೆದನು.

ಪಾರ್ಸೆಲನ್ನು ಒಡೆದು ನೋಡಿದಾಗ ಘಡಿಯಾರವು ಕೆಲಸ ಮಾಡುತ್ತಿರಲಿಲ್ಲ. ಬದಲಾಗಿ ವಾಚಪ್ಪನ ಎದೆಯು ಜೋರಾಗಿ ಕೆಲಸ

ಮಾಡಲು ಆರಂಭಿಸಿತು. ವಾಚಪ್ಪನಿಗೆ ಪರಮಾವಧಿ ವ್ಯಥೆಯಾಯಿತು. "ಜಾಹೀರಾತಿಗೆ ಮರುಳಾಗಿ ಮೋಸ ಹೋದೆನಲ್ಲಾ!" ಎಂದು ಯೋಚಿಸಿ, ಕಡೆಗೆ, "ಮಿಂಚಿದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ"ವೆಂಬ ಹಿರಿಯರ ಸಾಣ್ಣುಡಿಯನ್ನು ಜ್ಞಾಪಿಸಿಕೊಂಡು, ವಾಚಿನ ದುರಸ್ತಿಗಾಗಿ ನೆಟ್ಟಗೆ "ರಾಮ್‌ರಾಮ್ ವಾಚ್ ವರ್ಕ್ಸ್"ಗೆ ಧಾವಿಸಿದನು.

ವಾಚನ್ನು ಹಿಂದಕ್ಕೂ ಮುಂದಕ್ಕೂ ತಿರುಗಿಸಿ ನೋಡಿ, ಪರೀಕ್ಷಿಸಿ, "ರಾಮ್‌ರಾಮ್ ವಾಚ್ ವರ್ಕ್ಸ್"ನ ಪ್ರೊಪ್ರೈಟರ್ ರಾಮಪ್ಪನು "ವಾಚಪ್ಪನವರೇ, ಇದನ್ನು ಸರಿಗೊಳಿಸಬೇಕಾದರೆ ಐದು ರೂಪಾಯಿ ಕೊಡಬೇಕಾಗುವುದು" ಎಂದು ರಿಮಾರ್ಕ್ ಹೇಳಿದನು.

"ಹತ್ತುವರೆ ರೂಪಾಯಿಗಳನ್ನು ಕೊಟ್ಟು ಇನ್ನೂ ಎರಡು ಘಂಟೆಯಾಗಿಲ್ಲ. ಈಗ ಮತ್ತೆ ಐದು ರೂಪಾಯಿಗಳಿಗೆ ಗತಿಯಾಯಿತಲ್ಲಾ" ಎಂದು ವಾಚಪ್ಪನು ಮನಸ್ಸಿನಲ್ಲೇ ಯೋಚಿಸತೊಡಗಿದನು ಕಡೆಗೆ ಈತನ ಯೋಚನೆಗೆ ಅಡ್ಡವಾಗುವಂತೆ "ವಾಚಪ್ಪನವರೇ, ಈ ವಾಚನ್ನು ನನಗೆ ಕೊಟ್ಟು ಮತ್ತೆ ಎರಡು ರೂಪಾಯಿಗಳನ್ನು ಕೊಟ್ಟರೆ, ನಾನು ನಿಮಗೊಂದು ಭಾರೀ ವಾಚನ್ನು ಕೊಡುವೆನು, ಆಗದೇ?" ಎಂದು ರಾಮಪ್ಪನೇ ತೀರ್ಪು ಹೇಳಿದನು.

"ಆಗಲಿ, ನೋಡೋಣ" ಎಂದನು ವಾಚಪ್ಪ.

ರಾಮಪ್ಪನು ಒಂದು ವಾಚನ್ನು ವಾಚಪ್ಪನ ಕೈಯಲ್ಲಿ ಕೊಟ್ಟನು. ವಾಚನ್ನು ಕಂಡು ವಾಚಪ್ಪನಿಗೆ ಸಮಾಧಾನವಾಯಿತು. ಕೂಡಲೇ ತನ್ನ ವಾಚನ್ನೂ, ಎಲ್ಲಿಂದಲೋ ಸಾಲ ತಂದ ಎರಡು ರೂಪಾಯಿಗಳನ್ನೂ ರಾಮಪ್ಪನಿಗೆ ಕೊಟ್ಟು, ಅವನ ಗಡಿಯಾರವನ್ನು ಕೈಗೆ ಕಟ್ಟಿಕೊಂಡು, ಆನಂದಸಾಗರದಲ್ಲಿ ತೇಲುತ್ತಾ, ಗಾಳಿಯಲ್ಲಿ ತೂರಿಕೊಂಡು ಮನೆದಾರಿ ಹಿಡಿದನು.

ಆ ದಿನ ಹನ್ನೆರಡು ಘಂಟೆಗೆ ವಾಚಪ್ಪನು "ವಾಚಿ"ಗೆ "ಕೀ" ಕೊಡಲು ಪ್ರಾರಂಭಿಸಿದನು. ಆದರೆ, ಕೀಲಿ ಕೊಟ್ಟುದು ಹೆಚ್ಚಾಗಿ ಒಳಗಿನ "ಸ್ಪ್ರಿಂಗ್" ತುಂಡಾಗಿ ವಾಚು ರಜೆ ಪಡೆಯಿತು. ವಾಚಪ್ಪನ ದುಃಖಕ್ಕೆ ಪಾರವಿಲ್ಲವಾಯಿತು. ಹುಟ್ಟಿದಂದಿನಿಂದ ವಾಚಿನ ಅನುಭವ ವಿಲ್ಲದುದರಿಂದ "ಸ್ಪ್ರಿಂಗ್" ತುಂಡಾಗಿ ವಾಚು ಹಾಳಾದುದೆಂದು ವಾಚಪ್ಪನು ಯೋಚಿಸಲಾರದೆ ಹೋದನು. ಹಾಗಾದ್ದರಿಂದ ರಾಮಪ್ಪನು ಹಾಳುವಾಚು ಕೊಟ್ಟನೆಂದು ಅವನಿಗೆ ಸ್ಪಷ್ಟವಾಚನವಾಯಿತು.

ಆಗ ನೆರೆಮನೆಯ ಕೃಷ್ಣಪ್ಪನು ಬಂದು ವಿಷಯವೇನೆಂದು ವಿಚಾರಿಸಿದನು. ವಾಚಪ್ಪನು ಎಲ್ಲಾ ಸಂಗತಿಗಳನ್ನು ಹೇಳಿದ ಮೇಲೆ, ಕೃಷ್ಣಪ್ಪನು ವಾಚನ್ನು ಕೈಗೆತ್ತಿಕೊಂಡು ಚೆನ್ನಾಗಿ ಪರೀಕ್ಷಿಸಿ, ಬಹು ಸುಲಭ ಖರ್ಚಿನಿಂದ ಸರಿಪಡಿಸಬಹುದೆಂದೂ, ವಾಚು ಅತ್ಯುತ್ತಮ ತರಗತಿಯದೆಂದೂ ಮನಗಂಡು, "ವಾಚಪ್ಪನವರೇ, ಈ ನಿಮ್ಮ ಹಾಳಾದ ವಾಚನ್ನೂ, ಒಂದು ರೂಪಾಯಿಯನ್ನೂ ನನಗಿತ್ತರೆ, ನಿಮಗೆ ಇಪ್ಪತ್ತು ವರ್ಷಗಳಿಂದಲೂ ಸರಿಯಾಗಿ ಕೆಲಸಮಾಡುತ್ತಿರುವ ನನ್ನ "ರಿಸ್ಟು ವಾಚ"ನ್ನು ಕೊಡುವೆನು" ಎಂದನು.

ವಾಚಪ್ಪನಿಗೆ ಆ ವಾಚು ಹೋದರೆ ಸಾಕೆಂದೆನಿಸಿತು. ಒಡನೆ ತನ್ನ ಕೈಯ ಉಂಗುರವನ್ನೂ, ವಾಚನ್ನೂ ಕೃಷ್ಣಪ್ಪನಿಗೆ ಕೊಟ್ಟು ಸರಿಯಾಗಿ ಸಮಯ ತೋರಿಸದೆ ಆ ತನಕ ಮೂಲೆಯಲ್ಲಿ ಬಿಲಗಿದ್ದ ವಾಚನ್ನು ಪ್ರತಿಯಾಗಿ ಪಡೆದನು. ಒಂದು ದಿನ ದೊಳಗೆ ಮೂರು ವಾಚುಗಳು ವಾಚಪ್ಪನನ್ನು ಕಂಡವು. ವಾಚಪ್ಪನ ಮೊದಲಿನ ವಾಚು ನಿಜವಾಗಿಯೂ ಶ್ರೇಷ್ಠ ತರಗತಿಯದಿತ್ತು. ಅವನ ಪಾಲಿಗೆ ಮಾತ್ರ ಅದು ಹಾಳಾಗಿ ಕಂಡಿತು. ಅಂದಿನಿಂದ ಅವನು ಕೃಷ್ಣಪ್ಪನಿಂದ ಪಡೆದ ವಾಚನ್ನು ಮಣಿಗಂಟಿಗೆ ಕಟ್ಟಿಕೊಂಡು ಮೆರೆಯು

ಲಾರಂಭಿಸಿದನು. ಆದರೆ ಅದು ಸರಿಯಾದ ಸಮಯವನ್ನು ಸೂಚಿಸ ದಿದ್ದರೂ, ಹಿಂದಿನವುಗಳಂತೆ ರಜೆಪಡೆಯದೆ ತನ್ನಿಂದಾದಷ್ಟು ಪ್ರಯ ತ್ನಿಸಿ ಕೆಲಸ ಮಾಡುತ್ತಿತ್ತು.

ಹೀಗಿರಲೊಂದುದಿನ ವಾಚಪ್ಪನಿಗೆ ಒಂದು ಮದುವೆನಿಮಿತ್ತ ದೂರದ ಊರಿಗೆ ಹೋಗಬೇಕಾಗಿ ಬಂತು. ಅದಕ್ಕಾಗಿ ಮಧ್ಯಾಹ್ನದ ಊಟ ತೀರಿಸಿ ಮನೆಯಿಂದ ಹೊರಬಿದ್ದನು. ಆಗ ಅವನ ಗಡಿಯಾರ ದಲ್ಲಿ ಎರಡು ಘಂಟೆಯಾಗಿತ್ತು. ರೈಲು ಬರಲು ಮತ್ತೊಂದು ಘಂಟೆ ತಡವಿದ್ದುದರಿಂದ ಅವಸರವಿಲ್ಲೆಂದು, ವಾಚಪ್ಪನು ಆಮೆಯನ್ನು ಹೀಯಾಳಿಸುವಂತೆ ನಡೆಯುತ್ತಿದ್ದನು. ಈ ರೀತಿಯಲ್ಲಿ ಅವನು 'ಸ್ಟೇಷನಿ'ಗೆ ಬಂದಾಗ ಅಲ್ಲಿನ 'ಕ್ಲಾಕ್' ನಾಲ್ಕುಸಲ ಬಡಿದುಕೊಂಡು ನಾಲ್ಕು ಘಂಟೆಯಾಯಿತೆಂದು ಹೇಳಿತು. ರೈಲು ಹೋಗಿ ಒಂದು ತಾಸು ಕಳೆದಿದ್ದರೂ ವಾಚಪ್ಪನ ವಾಚು ಮಾತ್ರ ಮೂರು ಘಂಟೆ ಯಾಯಿತೆಂದು ಸೂಚಿಸುತಿತ್ತು. ಹೀಗಾಗಿ ಅವನಿಗೆ ಮದುವೆಯ ಸಮಾರಂಭದಲ್ಲಿ ಭಾಗವಹಿಸುವ ಭಾಗ್ಯವು ತಪ್ಪಿಹೋಯಿತು.

ಮತ್ತೊಮ್ಮೆ ವಾಚಪ್ಪನು ತನ್ನ ವಾಚನ್ನು ನಂಬಿ ಕೋರ್ಟಿಗೆ ಹೋದಾಗ ಸಮಯ ಮೀರಿದುದರಿಂದ ಐವತ್ತು ರೂಪಾಯಿಗಳ ನಷ್ಟಕ್ಕೆ ಗುರಿಯಾದನು.

ಇನ್ನೊಮ್ಮೆ ಅವನ ವಾಚಿನಲ್ಲಿ ಹನ್ನೆರಡು ಘಂಟೆಯಾಗಿದ್ದರೂ ಸೂರ್ಯನು ಮಾತ್ರ ಮೂಡಿರಲಿಲ್ಲವಂತೆ. ಒಟ್ಟಿನಲ್ಲಿ ವಾಚಪ್ಪನು ಅದಾವುದೋ ಕೆಟ್ಟ ಸಮಯದಲ್ಲಿ ವಾಚನ್ನು ತೆಗೆದುಕೊಂಡು ಕಷ್ಟ ನಷ್ಟಗಳಿಗೆ ಗುರಿಯಾಗಬೇಕಾಯಿತು. ಕಡೆಗೆ ಜನರ ಅಪಹಾಸ್ಯಕ್ಕೂ ಗುರಿಯಾದನು.

"ಜಾಹೀರಾತಿನ ಪತ್ರಿಕೆ" ಎಂದು ಖ್ಯಾತಿಪಡೆದಿದ್ದ ವಾಚಪ್ಪನು ಈಗ ಈ ವಾಚಿನಿಂದಾಗಿ "ಫೊಟ್ಟು ವಾಚ್" ಎಂಬ ಬಿರುದು ಪಡೆದನು. ಎಲ್ಲೆಲ್ಲಿಯೂ ಇವನ ವಾಚಿನ ಕೀರ್ತಿಯು ಎಲ್ಲರಿಂದಲೂ ಹೊಗಳಲ್ಪಟ್ಟಿತು. ಸರಿಯಾಗಿ ಸಮಯ ಕೊಡದೆ ಬಹಳ ಕಷ್ಟ ಕೊಟ್ಟಿದ್ದ ಆ ವಾಚಿನ ಮೇಲೆ ಜಿಗುಪ್ಸೆಹುಟ್ಟಿ ಅದನ್ನು ಒಂದು ದಿನ ವಾಚಪ್ಪನು ಕೆರೆಯ ಮಡಿಲಲ್ಲಿ ಇಟ್ಟುಬಿಟ್ಟನು.

ಪಾಠಕ ವೃಂದ, ವಾಚಪ್ಪನಿಗೆ 'ಫೊಟ್ಟು ವಾಚ್' ಎಂಬ ಬಿರುದು ಬಯಸದೆ ಬಂದಿದ್ದರೂ, ಚೆನ್ನಾಗಿ ಒಪ್ಪುವದಿಲ್ಲವೇ?



# ೫. ಸ್ನೇಹವೋ? ಮೋಹವೋ?




ಮನಾ, ನನ್ನ ಮುದ್ದು ಕಂದಮ್ಮನು ಹೋದಳಲ್ಲಾ! ಯಾರಿಗೆ ಮೊರೆಯಿಡಲಿ? ಏನು ಮಾಡಲಿ?” ಎಂದು ರಾಜಮ್ಮನು ಕಂಬನಿಗರೆಯುತ್ತಾ, ವಾಮನ ಮೂರ್ತಿಯನ್ನು ಕರೆದಳು. ಕಿರುಮನೆಯಲ್ಲಿ ಓದುತ್ತಿದ್ದ ವಾಮನ ಮೂರ್ತಿಯು “ಏನಾಯಿತು ರಾಜಕ್ಕಾ?” ಎಂದು ಓಡಿಬಂದನು.

“ಮಗೂ, ವಾಮನಾ, ಇನ್ನೇನಾಗುವುದಿದೆ? ನೋಡಿದೆಯಾ, ಸುಶೀಲೆಯು ಗತಾಸುವಾಗಿ ಬಿದ್ದಿರುವಳು. ಪಿಶಾಚಿಯ ಬಾಧೆಯೋ? ಅಪಸ್ಮಾರವೋ? ತಿಳಿಯದಲ್ಲಾ! ಬೇಗನೆ ಡಾಕ್ಟರರನ್ನು ಬರಹೇಳು. ಅವರೂ (ಗಂಡ) ಮನೆಯಲ್ಲಿಲ್ಲವಲ್ಲಾ” ಎಂದಳು ರಾಜಕ್ಕ.

ಈ ರೀತಿಯ ದುಃಖಕರ ಸಂಭಾಷಣೆಯು ಬೆಂಗಳೂರು ನಗರದ ಅದೊಂದು ಬೀದಿಯಲ್ಲಿನ ಒಂದು ಭವ್ಯಮಂದಿರದಲ್ಲಿ ನಮ್ಮ ವಾಮನ ಮೂರ್ತಿಗೂ, ಸುಶೀಲೆಯ ತಾಯಿ ರಾಜಮ್ಮನಿಗೂ ನಡೆಯುತ್ತಿತ್ತು.

ವಾಮನನು ಕೃಷ್ಣರಾಯರ ಏಕಮಾತ್ರ ಪುತ್ರನು. ಕೃಷ್ಣರಾಯರಿಗೆ ಲಕ್ಷ್ಮಿಯು ತಾನಾಗಿ ಒಲಿದಿದ್ದಳು. ಎಂದರೆ, ಬೇಕಷ್ಟು ಹಣಕಾಸಿತ್ತು. ಅವರಿಗೆ ಯಾವ ಭಾಗದಲ್ಲಿಯೂ ಕೊರತೆಯಿರಲಿಲ್ಲ. ವಾಮನನಾದರೋ ಇಂಟರ್ ಕ್ಲಾಸಿಗೆ ಓದುತ್ತಿದ್ದನು. ಧನಿಕನ ಮಗನಾದುದರಿಂದ ಈಗಿನ ಯುವಕರಲ್ಲಿರಬೇಕಾದ ಚಾಳಿಗಳೆಲ್ಲವೂ

ಆತನಲ್ಲಿ ಸ್ವಾಭಾವಿಕವಾಗಿ ನೆಲೆಗೊಂಡಿದ್ದವು. ವಯಸ್ಸು ಇನ್ನೂ ಇಪ್ಪತ್ತೊಂದು ಕಳೆದಿರಲಿಲ್ಲ. ಗುಣದಲ್ಲಿಲ್ಲದಿದ್ದರೂ ರೂಪದಲ್ಲಿ ಬಲು ಚೆನ್ನಾಗಿದ್ದನು.

ಶೀನಪ್ಪಯ್ಯನವರು ಈಗೆರಡು ತಿಂಗಳುಗಳಿಂದ ಕೃಷ್ಣರಾಯರ ಮನೆಯ ಒಂದು ಭಾಗದಲ್ಲಿ ಬಿಡಾರಮಾಡಿಕೊಂಡಿದ್ದರು. ಇವರು ವಿದ್ಯಾ ಇಲಾಖೆಯ ಒಬ್ಬ ಉದ್ಯೋಗಸ್ಥರಾಗಿದ್ದರು. ಮೊನ್ನೆ ತಾನೆ ಮೈಸೂರಿನಿಂದ ಬೆಂಗಳೂರಿಗೆ ವರ್ಗಾಯಿಸಲ್ಪಟ್ಟಾಗ ಸಕುಟುಂಬಸ್ಥರಾಗಿ ಬಂದು ಮೇಲೆ ಹೇಳಿದಲ್ಲಿಳಿದಿದ್ದರು. ಸುಶೀಲೆ ಮತ್ತು ಜಗನ್ಮೋಹನ ಇವರಿಬ್ಬರು ಶೀನಪ್ಪಯ್ಯನ ಮಕ್ಕಳು. ಇವರಿಬ್ಬರ ತಾಯಿಯೇ ರಾಜಮ್ಮ.

ಸುಶೀಲೆಯು, ವಾಮನ ಮೂರ್ತಿಯು ಓದುವ ಶಾಲೆಯಲ್ಲೇ, ಐದನೇ ಇಯತ್ತೆಗೆ ಸೇರಿಸಲ್ಪಟ್ಟಿದ್ದಳು. ಜಗನ್ಮೋಹನನು ಇನ್ನೂ ಎಂಟನೇ ಪುಸ್ತಕವನ್ನು ಓದುತ್ತಿದ್ದನು. ಸುಶೀಲೆಯು ಹೆಸರಿಗೆ ತಕ್ಕಂತೆ ಸುಶೀಲೆಯೂ, ರೂಪವತಿಯೂ ಇದ್ದಳು. ಆಕೆಯು ಈಗ ಹದಿನೈದನೇ ವರ್ಷದಲ್ಲಿ ಕಾಲಿಟ್ಟಿದ್ದಳು.

ಮೊದಲು ಮೊದಲು ವಾಮನನು ಸುಶೀಲೆಯ ಕಡೆಗೆ ಹೆಚ್ಚಿನ ಗಮನಕೊಡಲಿಲ್ಲ. ಆದರೆ ಬರಬರುತ್ತಾ ಆಕೆಯಲ್ಲಿ ಮೋಹಗೊಂಡು, ಓದುವುದರಲ್ಲಿ ಹಿಂದೆ ಬೀಳಹತ್ತಿದನು. ಜಗನ್ಮೋಹನನಿಗೂ ಮೂರ್ತಿಗೂ ಹೆಚ್ಚಿನ ಸ್ನೇಹವಾಗಿ ಮೋಹನನಿಗೆ (ಜಗನ್ಮೋಹನ) ತಿಂಡಿ-ತಿನಸು, ಸಿಗಲಾರಂಭಿಸಿತು. ಮೂರ್ತಿಯು ಹೆಚ್ಚಾಗಿ ಶೀನಪ್ಪಯ್ಯನವರ ಬಿಡಾರಕ್ಕೆ ಹೋಗಿಬರುವ ಪರಿಪಾಠವನ್ನಿಟ್ಟುಕೊಂಡನು. ಒಮ್ಮೊಮ್ಮೆ ರಾಜಮ್ಮನಿಗೂ, ಮೂರ್ತಿಗೂ, ಬಹಳ ದೀರ್ಘದ ಸಂಭಾಷಣೆ ನಡೆಯುತ್ತಿತ್ತು. ಶೀನಪ್ಪಯ್ಯನವರು ಮಾತ್ರ ಮೂಕ ವೃತ್ತಿಯನ್ನವಲಂಬಿಸಿ ಸುಮ್ಮಗಿದ್ದರು. ದಿನಗಳ ಮೇಲೆ ದಿನಗಳು ಉರುಳಿದವು.

ಹೀಗಿರಲೊಂದು ದಿನ ಸುಶೀಲೆಯು ಅಕಸ್ಮಾತ್ತಾಗಿ ಮೂರ್ಛೆ ಹೋಗಿ ಬಿದ್ದುಬಿಟ್ಟಳು. ಮೇಲಿನ ಸಂಭಾಷಣೆಯು ಆಗಲೇ ನಡೆದುದು. ಮೂರ್ತಿಯು ಸುಶೀಲೆಯ ಸ್ಥಿತಿಯನ್ನು ಕಂಡು ಬಹುವಾಗಿ ಮರುಗಿದನು. ಕಡೆಗೆ ರಾಜಮ್ಮನಿಗೆ ಸಮಾಧಾನ ಹೇಳಿ, ಡಾಕ್ಟರ್ ರಾಮಚಂದ್ರರಾಯರನ್ನು ಕರತಂದನು. ಡಾಕ್ಟರರು ಆಕೆಗೆ ಚಿಕಿತ್ಸೆ ಮಾಡುತ್ತಿರುವಾಗ, ಮೂರ್ತಿಯು ಆಕೆಯ ಸೌಂದರ್ಯ ಸುಧೆಯನ್ನು ಪಾನಮಾಡತೊಡಗಿದನು. "ಮಿದುಳಿಗೆ ಹೆಚ್ಚಾದ ಕೆಲಸಕೊಟ್ಟುದರಿಂದ ಈ ರೀತಿಯಾಯಿತೆ"ಂದು ಹೇಳಿ, ಡಾಕ್ಟರರು ಆಕೆಗೆ ಮೂರ್ಛೆ ತಿಳಿವಂತೆ ಮಾಡಿದರು. ಸುಶೀಲೆಯು ಸ್ವಲ್ಪ ಹೊತ್ತಿನಲ್ಲಿ ಎದ್ದು ಕುಳಿತಳು. ಆದರೆ ಸಂಪೂರ್ಣ ಗುಣಹೊಂದಬೇಕಾದರೆ ಇನ್ನೂ ಕೆಲವು ದಿನಗಳು ಬೇಕಾದುವು. ಅದುವರೆಗೆ ಮೂರ್ತಿಯು ಹಗಲು ರಾತ್ರಿಯೆನ್ನದೆ ಆಕೆಯ ಉಪಚಾರ ಗೈದುದರಿಂದ, ಆಕೆಯು ಮೂರ್ತಿಯೊಡನೆ ಭ್ರಾತೃಭಾವದ ಸಲುಗೆಯಿಂದ ವರ್ತಿಸತೊಡಗಿದಳು.

ಅಂದಿನಿಂದ ಮಲ್ಲಿಗೆ– ಗುಲಾಬಿ ಹೂಗಳೂ, ರಿಬ್ಬನು ಕ್ಲಿಪ್ಪುಗಳ ರಾಶಿಯೂ, ತಿಂಡಿ–ತಿನಿಸುಗಳ ಕಟ್ಟುಗಳೂ ಮೋಹನನ ಮೂಲಕವಾಗಲೀ, ಬೇರೆ ರೀತಿಯಿಂದಾಗಲೀ ಸುಶೀಲೆಯ ಕಡೆಗೆ ಮೂರ್ತಿಯಿಂದ ಬರತೊಡಗಿದವು. ಸುಶೀಲೆಯು ಅದಾವ ಕಾರಣದಿಂದಲೋ, ತಿರಸ್ಕರಿಸದೆ ಅವುಗಳೆಲ್ಲವನ್ನೂ ಸ್ವೀಕರಿಸುತ್ತಿದ್ದಳು. ರಾಜಮ್ಮನು ಇದಾವುದಕ್ಕೂ ಉಸಿರೆತ್ತದೆ ಸುಮ್ಮಗಿದ್ದಳು. ಶೀನಪ್ಪನವರ ಸ್ಥಿತಿಯೂ ಹಾಗೆಯೇ.

ಆದರೆ ಮತ್ತೆ ಕೆಲವು ದಿನಗಳಲ್ಲಿ ಶೀನಪ್ಪನವರಿಗೂ, ಮೂರ್ತಿಗೂ ಸಿಟ್ಟಾಗಿ, ಮೂರ್ತಿಯು ಅಲ್ಲಿಗೆ ಹೋಗುವುದನ್ನೇ ನಿಲ್ಲಿಸಿಬಿಟ್ಟನು. ಸುಶೀಲೆಯೂ ಆತನನ್ನು ತಿರಸ್ಕರಿಸ ತೊಡಗಿದಳು.

* * * * * *

ಒಂದು ತಿಂಗಳ ಮೇಲಿನ ಮಾತು. ಈಗ ಮಾತ್ರ ಮೂರ್ತಿಯು ದಿನಕ್ಕೆಂಟು ಬಾರಿ ಶೀನಪ್ಪನವರಲ್ಲಿಗೆ ತೆರಳುವನು. ಸುಶೀಲೆಯೊಡನೆ ನಿರ್ಭಯವಾಗಿ ಪ್ರಣಯದ ಮಾತೆತ್ತುವನು. ಆಕೆಗೆ ತಾನೇ ಕೈಮುಟ್ಟಿ ಹೂ ಮುಡಿಸುವನು. ಮುದ್ದು ಕೊಡುವನು. ಭ್ರಾತೃಭಾವವು ಮಾಯವಾಗಿ ಈಗ ಸುಶೀಲೆಯು ಮೂರ್ತಿಯ ಕೈಗೊಂಬೆಯಾಗಿರುವಳು. ಶೀನಪ್ಪನವರೂ ಈಗ ಮಾತಾಡುವುದಿಲ್ಲ. ರಾಜಮ್ಮನು ಮಕ್ಕಳನ್ನು ಇನ್ನಷ್ಟು ಹುರುಪುಗೊಳಿಸುತಿದ್ದಳು. ಮೋಹನನು ಮೂರ್ತಿಯನ್ನು "ಭಾವ"ನೆಂದು ಮಾತ್ರ ಕರೆಯಲು ಪ್ರಾರಂಭಿಸಿಲ್ಲ.

ಈ ರೀತಿಯಾಗಲು, ವಶೀಕರಣದ ರೀತಿಯರಿತ, ಮತ್ತು ಪೋಲೀಸರ ರಿಜಿಸ್ಟ್ರಿಯಲ್ಲಿ ಹೆಸರು ದಾಖಲು ಮಾಡಿಸಿಕೊಂಡಿರುವ ಮಾನಪ್ಪನ ಸ್ನೇಹವೇ ಕಾರಣವೆಂದು ನೆರಮನೆ ಸುಬ್ಬಕ್ಕನು ಮಾತ್ರ ಆಗಾಗ ಹೇಳುತ್ತಿದ್ದಳು.

ಈಗ ಮೂರ್ತಿ—ಸುಶೀಲೆಯರೂ, ಮೋಹನನೂ ಒಂದಾಗಿಯೇ ಕಾಲೇಜಿಗೆ ಹೋಗುವರು. ಸಹಪಾಠಿಗಳು ಸುಶೀಲೆಗೆ ಅಪಹಾಸ್ಯ ಮಾಡದಂತೆ ಮೂರ್ತಿಯೇ ಬಹು ಸಾಹಸಪಟ್ಟು ನೋಡಿಕೊಳ್ಳುತ್ತಿದ್ದನು. ಹೀಗಾಗಿ ಶಾಲಾ ಬಾಲಕರೆಲ್ಲರೂ ಈತನಿಗೆ ಹಾಸ್ಯ ಮಾಡಲಾರಂಭಿಸಿದರು. ಮೂರ್ತಿಯು ಇದಾವುದಕ್ಕೂ ಸೊಪ್ಪು ಹಾಕದೆ, ಒಂದೇ ಸವನೆ ಸುಶೀಲಾದೇವಿಯ ಸೇವೆಮಾಡುತ್ತಿದ್ದನು. ಹೀಗೆಯೇ ವರ್ಷಾಂತ್ಯದಲ್ಲಿನ ಪರೀಕ್ಷೆಯಲ್ಲಿಯೂ "ಫೈಲ್" ಆಗಿಬಿಟ್ಟನು. ಕೆಲವು ಸಮಯದ ಹಿಂದೆ ಗುಣವಂತೆ ಎನಿಸಿಕೊಂಡಿದ್ದ ಸುಶೀಲೆಯು ಈಗ ವಾಮನ ಮೂರ್ತಿಯ ತಾಳಕ್ಕೆ ಸರಿಯಾಗಿ ಕುಣಿಯಲು ಮಾನಪ್ಪನ ವಶೀಕರಣದ ಮದ್ದು ಕಾರಣವೆಂದು ಎಲ್ಲರೂ ಯೋಚಿಸಿದರು. ಅವಳ ಸೇವೆಯಿಂದಲೇ ಮೂರ್ತಿಯು "ಫೈಲ್" ಆದುದೆಂದೂ ಭಾವಿಸಿದರು.

ಆದರೂ ಮೂರ್ತಿಯು ಧೈರ್ಯಗೆಡದೆ ಶಾಲೆಗೆ ಹೋಗುವುದನ್ನು ನಿಲ್ಲಿಸಿ, ಸುಶೀಲೆಯನ್ನು ಇನ್ನೊಂದು ಕಾಲೇಜಿಗೆ ಹೋಗುವಂತೆ ಮಾಡಿದನು. ಸುಶೀಲಾ—ಮೂರ್ತಿಯರ ಸ್ನೇಹವು ಒಂದೇ ರೀತಿಯಲ್ಲಿ ನಡೆಯುತಿತ್ತು.

ಕೆಲವು ದಿನಗಳಲ್ಲಿ ಮೂರ್ತಿಯು ಜ್ವರದಿಂದಾಗಿ ಹಾಸಿಗೆ ಹಿಡಿದು ಮಲಗಿಬಿಟ್ಟನು. ಧನಿಕನ ಮಗನಲ್ಲವೇ? ನಿಮಿಷಕ್ಕೊಬ್ಬರಂತೆ ಡಾಕ್ಟರರು ಬರಲಾರಂಭಿಸಿದರು. ಈ ಭಾಗದಲ್ಲಿ ಸುಶೀಲೆಯೂ ತನ್ನ ಕೈಲಾದಷ್ಟು ಸಹಕರಿಸಿದಳು. ಸುಶೀಲೆಯ ಕರ ಸ್ಪರ್ಶದಿಂದಲೋ ಎಂಬಂತೆ, ಮೂರ್ತಿಯ ಜ್ವರವು ಕೆಲದಿನಗಳಲ್ಲೇ ವಾಸಿಯಾಯಿತು. ಆದರೆ ಶರೀರದಲ್ಲಿ ನಿರ್ಬಲತೆಯು ಹೆಚ್ಚಾಯಿತು. ಅದರಿಂದಾಗಿ, ಸುಶೀಲೆಯನ್ನು ಅರೆನಿಮಿಷವೂ ಅಗಲಿರಲಾರದ ಮಾಮನ ಮೂರ್ತಿಯು, ಡಾಕ್ಟರರ ಬಲಾತ್ಕಾರಕ್ಕಾಗಿ ಹವೆಯ ಬದಲಾವಣೆಗೆಂದು ಮದನ ಪಳ್ಳಿಗೆ ಹೊರಟುಹೋದನು. ಅಂದಿನಿಂದ ಸುಶೀಲೆಯ ದುಃಖಕ್ಕೆ ಕೊನೆಮೊದಲಿಲ್ಲವಾಯಿತು.

ಇತ್ತ ಪ್ರಾಪ್ತ ವಯಸ್ಸಿನ ಮಗಳ ಲಗ್ನವಿಚಾರವು ಶೀನಪ್ಪನವ ರಲ್ಲಿ ಬಲವಾಯಿತು. ಅವರಿಗೆ ದಿನವೆಲ್ಲಾ ವರನನ್ನು ಹುಡುಕುವುದೇ ಕೆಲಸವಾಯಿತು. ಸುಶೀಲೆಯನ್ನು ಹೃದಯಮಂದಿರದಲ್ಲಿಟ್ಟು ಪೂಜಿ ಸುತ್ತಿದ್ದ ಮೂರ್ತಿಯನ್ನು ಬಿಟ್ಟು, ಶೀನಪ್ಪನವರು ಅದೇಕೆ ಬೇರೆ ವರ ನನ್ನು ಹುಡುಕಲು ಹೋದರೋ ನಾವರಿಯೆವು. ಕಟ್ಟಕಡೆಗೆ ಸುಶೀಲೆ ಯನ್ನು ಉಡ್ಪಿಯ ಪ್ರಸಿದ್ಧ ವಕೀಲ ಲಂಬೋದರ ರಾಯರಿಗೆ ಕೊಡುವು ದೆಂದೇ ನಿಶ್ಚಿತವಾಯಿತು. ಆದರೆ ರಾಜಮ್ಮ, ಸುಶೀಲೆಯರಿಗೆ ಈ ಸಂ ಬಂಧವು ಎಷ್ಟುಮಾತ್ರವೂ ಸರಿಕಾಣಲಿಲ್ಲ. ಆದರೂ ಶೀನಪ್ಪನವರ ಭಯಕ್ಕಾಗಿ ಸಮ್ಮನಿದ್ದರು. ಕೆಲವೇ ದಿನಗಳಲ್ಲಿ ವಿವಾಹ ಸಮಾ ರಂಭವೂ ಮುಗಿಯಿತು. ಸುಶೀಲೆಯು ಲಂಬೋದರರಾಯರ ಗೃಹಿಣಿ

ಯಾದಳು. ಇವೆಲ್ಲಾ ವಿಚಾರಗಳು ಅತಿ ತ್ವರ್ಯದಲ್ಲೇ ಮುಗಿದು ದರಿಂದ ಸುಶೀಲೆಯ ಸ್ನೇಹಿತ ಇಲ್ಲವೆ ಪ್ರಣಯಿಯೆನಿಸಿದ್ದ ಮೂರ್ತಿಗೆ ಪತ್ರ ಬರೆಯಲು ಕೂಡಾ ಅವಕಾಶ ಸಿಗಲಿಲ್ಲ. ಸುಶೀಲೆಯನ್ನೇ ಆಶಿಸುತ್ತಿದ್ದ ಮೂರ್ತಿಗೆ ಇದಾವ ಘಟನೆಗಳೂ ಗೊತ್ತಿರಲಿಲ್ಲ.

ಮದನಪಲ್ಲಿಯಲ್ಲಿ ಸಂಪೂರ್ಣ ಆರೋಗ್ಯ ಹೊಂದಿದ ಮೂರ್ತಿಯು ಸುಶೀಲೆಯನ್ನು ನೋಡುವ ಉತ್ಸುಕತೆಯಿಂದ ಬೇಗನೆ ಬೆಂಗಳೂರಿಗೆ ಬಂದನು. ಸುಶೀಲೆಯು ಲಂಬೋದರ ರಾಯರನ್ನು ಮದುವೆಯಾದಳೆಂದು ತಿಳಿದೊಡನೆ ಮೂರ್ತಿಯು ತಲೆತಿರುಗಿ ಬಿದ್ದುಬಿಟ್ಟನು. ಲೋಕವೇ ಅಂಧಕಾರಮಯವಾಗಿ ಆತನಿಗೆ ಕಾಣಿಸಿತು. ಅಂದಿನ ದಿನವು ಆತನ ಪಾಲಿಗೆ ಏಕಾದಶಿಯಾಯಿತು. ಹಗಲೆಲ್ಲಾ ಸುಶೀಲೆಯನ್ನೇ ನೆನೆನೆನೆದು ಅಳುತ್ತಿದ್ದನು. ಯಾರೊಡನೆಯೂ ತನ್ನ ಚಿಂತೆಯ ಕಾರಣವನ್ನು ತಿಳಿಸಲಿಲ್ಲ. ಶೀನಪ್ಪನವರು ಮಾತ್ರ ಈ ಭಾಗದಲ್ಲಿ ಸರ್ವಜ್ಞರು.

* * * * * *

ಮರುದಿನ ಊರ ಕೆರೆದಂಡೆಯಲ್ಲಿ ಬಿದ್ದಿರುವ ಪತ್ರವೊಂದನ್ನು ಯಾರೋ ಕಂಡು, ಶೀನಪ್ಪನವರಿಗೆ ಸಂಬಂಧಿಸಿದುದೆಂದು ಅವರಿಗೆ ತಲಪಿಸಿದರು. ಅದರಲ್ಲಿ—

"ಹಾ! ಪ್ರಿಯೇ, ಸುಶೀಲೆ, ನಿನ್ನ ಪ್ರಣಯ ಭಿಕ್ಷೆಗಾಗಿ ಹಾತೊರೆಯುತ್ತಿದ್ದ ನನ್ನನ್ನು ತ್ಯಜಿಸಿ, ನೀನು ಇನ್ನೊಬ್ಬನ ಕೊರಳಿಗೆ ಹೇಗೆ ಮಾಲೆ ಹಾಕಿದೆ? ನಿನ್ನ ಕರ,—ಮನಗಳನ್ನು ಈ ಮೊದಲೇ ನಾನು ಅಪಹರಿಸಿದ್ದರೂ, ಆ ಪಾಪಿಗೆ ನಿನ್ನಲ್ಲಿ ಎಡೆ ದೊರೆಯಿತೇ? ನೀನೆಂತಹ ಕೃತಘ್ನೆಯು! ನಿನಗಾಗಿ ಎಂತೆಂತಹ ಸ್ನೇಹ ಬೆಳೆಸಿದೆ! ಈ ಮೊದಲು ನೀನು ನನ್ನನ್ನು ಪ್ರಾಣಪ್ರಿಯನಂತೆಯೂ ನಿನ್ನ ತಾಯಿ ತಂದೆಗಳು ಅಳಿಯನಂತೆಯೂ ಕಾಣುತಿದ್ದು, ಈಗ ಈ ರೀತಿ ಗೈದ ಮೇಲೆ ನಾನಿನ್ನು

ಬದುಕಿ ಪ್ರಯೋಜನವೇನು? ನಿಮ್ಮಂತಹ ಚಾಂಡಾಲರ ಸ್ನೇಹ,-ಮೋಹ ಮಾಡಿಕೊಳ್ಳುವವರಿಗೆ ಈ ಕೆರೆಯೇ ಶಾಂತಿಸಾಮ್ರಾಜ್ಯವಾಗಿರುವುದು. ಇನ್ನಾದರೂ ನೀನು ಸದ್ಬುದ್ಧಿಯಿಂದ ಸಂಸಾರ ನಡೆಸಿಕೊಂಡಿರು.

ಇತಿ, ನಿನ್ನ
ಸ್ನೇಹ,-ಮೋಹಾಭಿಲಾಷಿಯಾಗಿದ್ದ,
**ವಾಮನಮೂರ್ತಿ.**

ಎಂಬುದಾಗಿ ಬರೆದಿತ್ತು. ಪತ್ರವನ್ನೋದಿ ಶೀನಪ್ಪನವರೂ, ಕೃಷ್ಣರಾಯರೂ ದೊಪ್ಪನೆ ಬಿದ್ದುಬಿಟ್ಟರು. ಸುಶೀಲ-ವಾಮನರ ಪ್ರೇಮದ ತಿರುಳನ್ನರಿತ ಶೀನಪ್ಪನವರ ಬಾಯಿಂದ ಈ ಉದ್ಗಾರ ಹೊರಟಿತು.

"ಇದೇನು, ಸ್ನೇಹವೋ?-ಮೋಹವೋ?"



# ೬. ವಿಜ್ಞಾನಿಯಾದುದು



‘ಈಗಿನ ಯುಗವೇ ವಿಜ್ಞಾನದ ಯುಗ. ಎಲ್ಲೆಲ್ಲಿಯೂ ವಿಜ್ಞಾನದ ಮಹತ್ವವು ಕಂಡುಬರುವುದು. ವಿಜ್ಞಾನ ಯುಗವು ಮುಂದುವರಿಯುತ್ತಿರುವಂತೆ ಜನರೆಲ್ಲರೂ ನಾಗರಿಕತನದಲ್ಲಿ ಮುನ್ನಡೆಯುತ್ತಿರುವರು. ಎಲ್ಲೆಲ್ಲಿಯೂ ನಾಗರಿಕತೆಯು ಒಡೆದು ಕಾಣುತ್ತಿದೆ. ಉಡಿಗೆಯಲ್ಲಿಯೂ, ತೊಡಿಗೆಯಲ್ಲಿಯೂ, ಕೂದಲಿನಲ್ಲಿಯೂ, ಕಣ್ಣಿನಲ್ಲಿಯೂ, ಕಿವಿಯಲ್ಲಿಯೂ ನಾಗರಿಕತೆ; ಸುಧಾರಣೆ. ಹೆಚ್ಚೇಕೆ? ಅಡಿಗೆ ಕೋಣೆಯಲ್ಲಿಯೂ ಸುಧಾರಣೆಯು ನಲಿದಾಡುತ್ತಿರುವುದು. ನಮ್ಮಂತಹ ಹೆಂಗಸರೆಲ್ಲರೂ ಸುಧಾರಣೆಯನ್ನೇ ಬಯಸುತ್ತಿರುವರು. ಹೆಂಗಸರಿಗೂ ನಾಗರಿಕತನ ಬೇಕು, ವಿಜ್ಞಾನವು ಬೆಳೆಯಬೇಕು ಎಂದಿರುವಾಗ, ನೀವು ಮಾತ್ರ ಈ ಕಾಲದಲ್ಲಿ ವಿಷವಿಲ್ಲದ ಹಾವಿನಂತೆ ಬಿದ್ದಿರುವಿರೇಕೆ? ನಾಗರಿಕತೆಯ ಧ್ವಜಾಗ್ರದಲ್ಲಿ ಮೆರೆಯುವ ನೀವು, ವಿಜ್ಞಾನದ ಬೆಳವಣಿಗೆಗಾಗಿ ಅದೇಕೆ ಪ್ರಯತ್ನಿಸಕೂಡದು? ನಿಮ್ಮಲ್ಲಿ ಪೌರುಷವಿಲ್ಲವೆ? ನೀವೇಕೆ ಸಾಹಸಪಟ್ಟು ವಿಖ್ಯಾತ ವಿಜ್ಞಾನಿಯಾಗಬಾರದು? ಏಳಿರಿ, ಇಂದೇ ಸೊಂಟಕಟ್ಟಿರಿ. ನಾನಂದಂತೆ ಮಾಡಿ ಲೋಕವನ್ನೇ ಬೆರಗುಗೊಳಿಸಿರಿ. ಅಂದರೆ ನಾನು ನಿಮ್ಮ ಕೈಹಿಡಿದುದು ಸಾರ್ಥಕವಾಗುವುದು. ಹೂಂ, ಏಳಿರಿ’ ಎಂದು ರಮೆಯು ನನ್ನ ಗಲ್ಲವನ್ನಲುಗಿಸುತ್ತಾ ಮಧುರ ಸ್ವರದಿಂದ ನುಡಿದಳು.

ಆಕೆಯ ಮಂಜುಲ ಹಾಗೂ ಹುರುಪುಗೊಳಿಸುವ ವಾಣಿಯನ್ನು ಕೇಳಿ, ‘ಇದ್ದರೆ ಇಂಥಾ ಪತ್ನೀರತ್ನವಿರಬೇಕೆ’ಂದು ಮನಸ್ಸಿನಲ್ಲೇ

ಆನಂದ ಪಟ್ಟೆನು. ಆ ಆನಂದದ ಭರದಲ್ಲಿ, ರಮೆಯನ್ನು ಭಾಹುಪಾಶಗಳಿಂದ ಅಪ್ಪಿ, ಕೆನ್ನೆಯಲ್ಲಿ ಗಾಯಮಾಡುವಂತೆ ಮುದ್ದಿಟ್ಟುದರ ಅರಿವೇ ನನಗಾಗಲಿಲ್ಲ.

"ಮನ್ಮನೋರಮಾ! ಕೇಳು. ವಿಜ್ಞಾನಿಯಾಗುವುದೇನು ಸಾಮಾನ್ಯವಲ್ಲ. ನಮ್ಮಂತಹರು ವಿಜ್ಞಾನಿಗಳಾಗಬೇಕಾದರೆ ಈ ಯುಗವೇ ಮಗುಚಬೇಕಾಗುವುದು. ನಿನ್ನ ಬಾಲ ಬುದ್ಧಿಗನುಸರಿಸಿ ನುಡಿದರೆ ವಿಜ್ಞಾನವು ಯಾರಿಗೂ ಬರಲಾರದು" ಎನ್ನುತ್ತಿರುವಾಗ ನನ್ನ ಅಧರಗಳು ನನ್ನಪ್ಪಣೆ ಪಡೆಯದೆ ತಿರುಗಿ ರಮೆಯ ಕೆನ್ನೆಯ ಮೇಲೆ ಅಕ್ರಮ ಪ್ರವೇಶ ಮಾಡಿಬಿಟ್ಟವು.

ರಮೆಯು ಪ್ರಣಯದ ಮುನಿಸಿನಿಂದ "ನಿಮಗೇನು ಲಜ್ಜೆಯಿಲ್ಲವೇ? ಹೀಗೆಲ್ಲಾ ಸಿಕ್ಕಿದಂತೆ ಮುದ್ದಿಡಲು ನಿಮಗೇನು ಬುದ್ಧಿಯಿಲ್ಲವೇ? ವಿಜ್ಞಾನ ಶೋಧೆ ನಡೆಸಿ ಜಗತ್ತನ್ನೇ ಬೆರಗು ಮಾಡುವನಕ ನನ್ನ ಕೆನ್ನೆ ಮುಟ್ಟಲು ನಿಮಗೆ ಇನ್ನು ಅಧಿಕಾರವಿಲ್ಲ. ತಿಳಿಯಿತೇ?" ಎಂದವಳೇ ಮೊಗದಿರುಹಿ ಕುಳಿತು ಬಿಟ್ಟಳು.

ಈಗ ಮಾತ್ರ ನನಗೆ ಪಜೀತಿಯಾಯಿತು. ಅನುದಿನವೂ ಸುಲಭಸಾಧ್ಯವಾಗಿ ರಮೆಯ ಅಧರಾಮೃತಪಾನವು ಸಿಗುತ್ತಿತ್ತು. ಆದರೆ ಇನ್ನು ಮಾತ್ರ ಬಹು ಕಷ್ಟದಿಂದ ಸಾಧಿಸಬೇಕಾಯಿತಲ್ಲಾ ಎಂಬುದೇ ನನ್ನ ಯೋಚನೆ. ಆದರೂ ಪ್ರಯತ್ನಿಸಬೇಕೆಂದು "ರಮಾ, ನೀನಾದರೋ ಚುಂಬನಕ್ಕೆ ವಿರಾಮವಿತ್ತೆ. ಆದರೆ ನೋಡು, ನಾನು ವಿಜ್ಞಾನಿಯಾಗಿ ಮಾಡತಕ್ಕುದೇನಿದೆ? ಯಾವ ಹೊಸ ಶೋಧೆ ನಡೆಸಲಿ? ಎಲ್ಲವನ್ನು ಮೊದಲೇ ಶೋಧಿಸಿರುವರು. ನೋಡು, ಆಕಾಶ ಪ್ರಯಾಣಕ್ಕೆ ವಿಮಾನವು (Aeroplane) ಈ ಮೊದಲೇ ಉಂಟಾಗಿದೆ. ಮತ್ತೆ ಚಂದ್ರ, ಬುಧ ಮೊದಲಾದ ಗ್ರಹಗಳೆಡೆಗೆ ಹೋಗಬೇಕೆಂದು ಸನ್ನಾಹಗಳು ಬೇರೆಯವರಿಂದ ಈ ಮೊದಲೇ ಜರಗಿವೆ. ಆ ಭಾಗ

ದಲ್ಲಿ ನಾನು ತಲೆ ಹಾಕುವುದು ಸರಿಯಲ್ಲ. ಇನ್ನು ನೆಲದ ಮೇಲೆ ಓಡಾಡುವವುಗಳಲ್ಲಿ ಶೋಧೆ ನಡೆಸಲು ನನ್ನ ಪಾಲಿಗೆ ಬಾಕಿಯೇ ಉಳಿದಿಲ್ಲ. ರೈಲು ಗಾಡಿ, ಮೋಟಾರು ಗಾಡಿ, ಟ್ರಾಮ್, ಸೈಕಲು ಗಳನ್ನು ತಯಾರಿಸಿಯೇ ಇರುವರು. ನೀರ ಮೇಲಿನ ಪ್ರಯಾಣಕ್ಕೆ ಬೇಕಾಗಿ ವಾಹನಗಳನ್ನು ತಯಾರಿಸಲೋ ಎಂದರೆ ನೀರ ಮೇಲೆ ಮಾತ್ರವಲ್ಲದೆ, ನೀರೊಳಗೂ ಸಂಚರಿಸ ಬಲ್ಲ ಸಾಧನಗಳನ್ನು ಈ ಮೊದಲೇ ಕಂಡುಹಿಡಿದಿರುವರು. ದೀಪದ ವಿಷಯದಲ್ಲಿ ಸುಧಾರಣೆಯ ಅವಶ್ಯಕತೆಯೇ ಇಲ್ಲ. ಎಣ್ಣೆ ಬತ್ತಿಗಳಿಲ್ಲದೆ ಉರಿಸಬಹುದಾದ ವಿದ್ಯುದ್ದೀಪವನ್ನು ಕಂಡುಹಿಡಿದಿರುವರು. ಯುದ್ಧ ಸಾಮಗ್ರಿಗಳಲ್ಲಿ ಶೋಧೆ ನಡಿಸಿ ಹೊಸ ಮಾರ್ಗ ಕಂಡು ಹಿಡಿಯೋಣವೆಂದರೆ, ನೆನಸಲೂ ಸಾಧ್ಯವಾಗದಂತಹ ರೀತಿಯ ಸಾಧನಗಳನ್ನು ಉಂಟುಮಾಡಿರುವರು. ಸತ್ತವನನ್ನು ಬದುಕಿಸುವ ಯತ್ನವು ಈ ಮೊದಲೇ ಫಲಕ್ಕೆ ಬಂದಿದೆ. ಇನ್ನು ರೇಡಿಯೋ, ಚಲಚ್ಚಿತ್ರ, ಟೆಲಿಫೋನು, ಟೆಲಿಗ್ರಾಫ್, ಗ್ರಾಮೋ ಫೋನುಗಳೆಲ್ಲವು ತಯಾರಿಸಲ್ಪಟ್ಟಿವೆ. ಸಾವಿರಾರು ಮೈಲು ದೂರ ದಲ್ಲಿರುವವನೊಡನೆ ಸಂಭಾಷಣೆ ಮಾಡಬಹುದೆಂದ ಮೇಲೆ ಇನ್ನಾವುದು ತಾನೇ ಬಾಕಿ? ಇನ್ನು ಮನುಷ್ಯನ ಉಡಿಗೆ ತೊಡಿಗೆಯ ಮಾತೇ ಬೇಡ. ಆ ಮಟ್ಟಿಗೆ ಎಲ್ಲರೂ ಶೋಧೆ ನಡೆಸುವವರೆ. ಅಂದ ಮೇಲೆ ನಾನು ವಿಜ್ಞಾನಿಯಾಗಿ ಮಾಡತಕ್ಕುದೇನಿದೆ? ನೀನೇ ಯೋಚಿಸು" ಎಂದು ನಾನು ರಮೆಯ ಆನನವನ್ನೊಮ್ಮೆ ನೋಡಿದೆನು. ಆದರೆ ಆಕೆಯಿನ್ನೂ ಬೇರೆ ದಿಕ್ಕನ್ನೇ ನೋಡುತ್ತಿದ್ದಳು. ಪುನಃ ಮುಂದುವರಿಸಿದೆನು.

"ಆಗಲಿ, ರಮಾ, ನೀನು ಹಟಮಾರಿ ಹೆಣ್ಣು. ಹಿಡಿದ ಛಲ ಬಿಡುವವಳಲ್ಲ. ಅದಕ್ಕಾಗಿಯೋ ಎನ್ನುವಂತೆ ಫಕ್ಕನೆ ಒಂದು ಯೋಚ ನೆಯೂ ಆಯಿತು. ಕೇಳು, ನಿನ್ನ ಮಾತಿನಂತೆ ನಾನು ವಿಜ್ಞಾನ ಶೋಧೆ ನಡೆಸುವೆನು. ಜಗತ್ತನ್ನೇ ಬೆರಗುಗೊಳಿಸುವೆನು. ಯಾರೂ ಈ ವರೆಗೆ ನಡೆಸದಂತಹ ಅತ್ಯದ್ಭುತ ಶೋಧೆ. ಮೊದಲನೆಯದಾಗಿ, ಉಳಕೊಳ್ಳಲು

ಸ್ಥಳವಿಲ್ಲದೆ ಕಂಗಾಲಾಗಿರುವ ಎಷ್ಟೋ ಕೋಟಿ ಜನರಿಗೆ ಯೋಗ್ಯ ಸ್ಥಳ ಸಿಗುವಂತೆ ಮಾಡಿ ಅವರ ಕಷ್ಟನಿವಾರಣೆ ಮಾಡುವುದು. ಅದಕ್ಕಾಗಿ ನನ್ನ ವಿಜ್ಞಾನ ಪರಿಶೋಧನೆಯಿಂದ ಈ ಸಾಗರಗಳ ನೀರನ್ನೆಲ್ಲಾ ಆರಿಸಿಬಿಡುವೆನು. ಆಗ ಜನರಿಗೆ ವ್ಯವಸಾಯ ಮಾಡುವುದಕ್ಕೂ, ಜೀವನ ನಡೆಸುವುದಕ್ಕೂ, ಸಾಕಷ್ಟು ಸ್ಥಳ ದೊರೆಯುವುದಿಲ್ಲವೆ? ನನ್ನ ಕೀರ್ತಿಯು ದಿಗಂತಕ್ಕೆ ಹರಡಿ, ಸೂರ್ಯ–ಚಂದ್ರಾದಿಗಳ ಅನಂತರವೂ ಶಾಶ್ವತವಾಗಿ ಮೆರೆದು ಕೊಂಡಿರುವುದೆಂಬುದಕ್ಕೆ ಸಂದೇಹವೇ ಇಲ್ಲ. ನಿನ್ನ ಅಭಿಮತವೇನು?" ಎಂದು ರಮೆಯನ್ನು ಕೇಳಿದನು, ಈ ಬಾರಿ ನನ್ನ ಮಾತುಗಳಿಂದ ಆಕೆಯು ಪ್ರಸನ್ನಳಾದಂತೆ ಕಂಡಿತು. ಒಮ್ಮೆ ಮುಗುಳ್ನಗೆ ನಕ್ಕು, ತನ್ನ ತುಟಿಗಳನ್ನು ನನ್ನ ತುಟಿಗಳಿಗೆ ಸಂಯೋಜಿಸಿ ಬಿಟ್ಟಳು. ಆಗ ಮಾತ್ರ ನನ್ನ ಮನಸ್ಸಿಗೆ ತುಂಬಾ ಶಾಂತಿ ದೊರೆಯಿತು. ಮತ್ತೆ ಹೇಳಲಾರಂಭಿಸಿದೆನು:—

"ರಮಾ, ಕೇಳು. ಲೋಕಕ್ಕೆ ಪ್ರತಿಯಾಗಿ ಲೋಕವನ್ನು ಸೃಜಿಸಿದರೆ ಸಾಲದು. ಅಲ್ಲಿನ ಜನರಿಗೆ ಉಣ್ಣಲು ತಿನ್ನಲು ಬೇಡವೇ? ಅವರು ನನ್ನನ್ನು ದಿನಕ್ಕೆ ಮೂರು ಮೂರು ಬಾರಿ ಸ್ಮರಿಸುವಂತೆ ಮಾಡುವೆನು. ಎಲ್ಲೆಲ್ಲಿಯೂ ಈಗ ನಿರುದ್ಯೋಗಿಗಳೂ, ಬಡವರೂ, ರೋಗಿಗಳೂ "ಅನ್ನ, ಅನ್ನ"ವೆಂದು ಮೊರೆಯಿಡುತ್ತಿರುವರು. ನಾನು ಅದಕ್ಕೂ ಶೋಧ ನಡಿಸಿ, ಮಾನವನಿಗೆ ಹಸಿವು–ನೀರಡಿಕೆಗಳೇ ಆಗದಂತೆ ಮಾಡುವೆನು. ಆಗಲಾದರೂ ಜಗತ್ತು ನನ್ನನ್ನು ಕೊಂಡಾಡದೇ? ಆದರೆ ನೀನು ಕೊಡಲಾರೆಯೆಂದಿದ್ದುದನ್ನು ಇನ್ನೊಮ್ಮೆ ಕೊಡದಿದ್ದರೆ ಉತ್ಸಾಹವೇಬಾರದು" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿಯೇಬಿಟ್ಟೆನು.

ರಮೆಯು "ನೀವೇನು ಮುದ್ದಿನಲ್ಲೇ ತಲ್ಲೀನರಾಗಿರುವಿರಿ? ಮುದ್ದುಕೊಟ್ಟರೆ ಊಟವೇ ಬೇಡವೆ?" ಎಂದು ನಸುನಗುತ್ತಾ

ಮತ್ತೊಮ್ಮೆ ನನ್ನನ್ನು ಮುದ್ದಿಸಿ "ಏಳಿರಿ, ಹೊತ್ತಾಯಿತು. ಇನ್ನೇಕೆ ತಡ?" ಎಂದಳು.

ಆಗ ನನ್ನ ಕೆನ್ನೆಯ ಮೇಲೆ ಯಾರೋ ಕೈಯಿಟ್ಟಂತಾಗಿ ಬಹಳ ತಂಪಾಯಿತು. ಕಣ್ದೆರೆದು ನೋಡಿದೆನು. ನಿಜವಾಗಿಯೂ ನನ್ನ ಮುದ್ದಿನ ರಮೆಯು ನನ್ನ ಕೆನ್ನೆಯನ್ನು ಸವರುತ್ತಾ "ಏಳಿರಿ, ಹೊತ್ತಾಯಿತು. ಇನ್ನೇಕೆ ತಡ?" ಎಂದು ನನ್ನನ್ನು ಎಚ್ಚರಗೊಳಿಸುತ್ತಿದ್ದಳು. ಸುತ್ತಲೂ ನೋಡಿಕೊಂಡು, ನಾನು ನನ್ನ ರೂಮಿನಲ್ಲೇ ಹಾಸಿಗೆ ಮೇಲಿರುವೆನೆಂದೂ, ರಮೆಯು ನನ್ನನ್ನು ಎಚ್ಚರಗೊಳಿಸುತ್ತಿರುವಳೆಂದೂ ಖಚಿತಪಡಿಸಿಕೊಂಡೆನು.



# ೭. ಭಾನುವಾರ




ಳು ‘ರೇಜರು’ ಮುಖವನ್ನೆಲ್ಲಾ ಕಚ್ಚಿತು. ಆ ಅಂಗಡಿಯವನು ಒಳ್ಳೆಯವುಗಳನ್ನು ತಂದಿರಿಸುವುದಿಲ್ಲ. ಈ ಮೋರೆಯನ್ನು ತೋರಿಸಿಕೊಂಡು ಈ ದಿನ ಬೇಂಕಿಗೆ ಹೇಗೆ ಹೋಗಲಿ? ಸಾಕು. ಇನ್ನೆಷ್ಟು ಹೊತ್ತು ಕೆತ್ತುವುದು? ಅಲ್ಲಲ್ಲಿ ಕೂದಲುಗಳಿದ್ದರೂ ಇರಲಿ. ಮರಳುಕಾಡಿನ ಖರ್ಜೂರದ ಗಿಡಗಳಂತೆ ಅಲ್ಲೊಂದು ಇಲ್ಲೊಂದು ರೋಮವಿದ್ದರೇನು ದೋಷ? ತಪ್ಪಿಸಿಕೊಂಡು ತಲೆಮರಸಿಕೊಂಡ ಕೈದಿಗಳಂತೆ ಇರಲಿ” ಎಂದು ಶ್ರೀನಿವಾಸರಾಯರು ನಸುಕಿನಲ್ಲಿ ಮುಖಕ್ಷೌರ ಮಾಡಿಕೊಳ್ಳುತ್ತಾ ಹರಟುತ್ತಿದ್ದರು.

ಆಗ ಒಳಗಿನಿಂದ ಗುಂಡಮ್ಮನವರು “ಏನಾಯಿತು? ಈಗ ಸಹಸ್ರನಾಮವು ಯಾರಿಗೆ?” ಎಂದು ಒಲೆಯ ಬೂದಿ ಎಳೆಯುತ್ತಾ ಕೇಳಿದರು. ಮುಖದ ಮಾಂಸ ಹೋದ ಕೋಪದೊಂದಿಗೆ, ಹೆಂಡತಿಯ ಮಾತುಗಳು ರಾಯರಿಗೆ ಶೂಲದಂತಾದುವು.

ಸಿಟ್ಟಿಗೆದ್ದ ರಾಯರು “ರಂ . . . . , ಬೂದಿ ತೆಗೆಯುವ ಕೆಲಸ ಬಿಟ್ಟು ಬಗುಳಲು ಪ್ರಾರಂಭಿಸಿರುವೆ. ನಿನ್ನ ಮೂಳೆಯನ್ನು ಪುಡಿ ಮಾಡುವೆನು. ಜಾಗ್ರತೆ. ನಾಯಿ!” ಎಂದು ಬೇಗ ಬೇಗನೆ ಸ್ನಾನದ ಮನೆಗೆ ನಡೆದರು. ಅವಸರದಿಂದ ಒಳಹೋಗುವಾಗ ಬಾಗಿಲು ತಾಗಿ ತಲೆಯು ಬಾತುಕೊಂಡಿತು.

ಗಂಡನ ಮಾತು ಕೇಳಿ ಗುಂಡಮ್ಮನವರು ಸಿಟ್ಟಿನಿಂದ "ಏನು? ಇನ್ನೊಮ್ಮೆ ಹೇಳಿರಿ. ನಿಮ್ಮ ಕುಲದ ವಿಷಯ ನನಗರಿಯದೇ? ಈಗ ಹೇಳಲು ಪ್ರಾರಂಭಿಸಿದೆನೆಂದರೆ ಕಾಗೆಯೊಂದೂ ಇಲ್ಲಿ ನಿಲ್ಲದು. ಬೆಳಗ್ಗೆ ಎದ್ದೊಡನೆ ಹೆಂಡ ಕುಡಿದಿರೇ?" ಎಂದು ತಮ್ಮ ಬುದ್ಧಿಗನು ಸರಿಸಿ ಏನೇನೋ ಒದರಿದರು. ರಾಯರ ಸಿಟ್ಟು ನೆತ್ತಿಗೇರಿತು. ಆ ಭರ ದಲ್ಲಿ ಬಿಸಿನೀರು ಬಿಸಿಯಾಗಿದ್ದುದೂ ಗೊತ್ತಾಗದೆ, ಗುಳ್ಳೆಗಳೆದ್ದ ಮೇಲೆ ಮಾತ್ರ ತಿಳಿಯಿತು. ರಾಯರು ಮೈಯ ನೀರನ್ನೂ ಒರಸಿಕೊಳ್ಳದೆ, ಒಳಗೆ ಓಡಿಬಂದು "ನಾಯಿ, ನಡೆ. ಈಗಲೇ ನಡೆ. ಹೂಂ. ಹೆಣವೋರೆ ಯವಳೆ, ಏನಂದೆ?—ಹೆಂಡ!!! ನಡೆ ಹೊರಗೆ. ನಿಮಿಷವೂ ನನ್ನೆ ದುರು ನಿಲ್ಲಕೂಡದು" ಎಂದವರೇ ಪಾಪದ (?) ಆ ಗುಂಡಮ್ಮನ ಕತ್ತು ಹಿಡಿದು ಹೊರಗೆ ದೊಬ್ಬಿಬಿಟ್ಟರು. ಗುಂಡಮ್ಮನು ದೊಡ್ಡ ಧ್ವನಿಯಿಂದ ಅಳಲಾರಂಭಿಸಿದರು.

ಹೆಂಡತಿಯನ್ನು ಹೊರಪಡಿಸಿದ ರಾಯರು, ಬೇಂಕಿಗೆ ಹೋಗಬೇ ಕೆಂದು ಅವಸರವಸರವಾಗಿ ಡ್ರೆಸ್ಸು ಮಾಡಿಕೊಂಡು ಹೊರಟರು. ಗಾಯಗಳಿಂದ ಆಗಲೂ ರಕ್ತ ಒಸರುತ್ತಿತ್ತು. ಹೆಂಡತಿಯ ಮೇಲಿನ ಸಿಟ್ಟಿನಿಂದ ಬೆಳಗ್ಗಿನ ಊಟಕ್ಕೆ ಸೊನ್ನೆಯಾದುದರಿಂದ ಒಂದಿಷ್ಟು ಕಾಫಿ ಕುಡಿಯೋಣವೆಂದು ಲಗುಬಗೆಯಿಂದ 'ಕ್ಲಬ್ಬಿ'ಗೆ ಹೋದರು. ಅಲ್ಲಿ ಕಾಫಿ ಕುಡಿಯುತ್ತಿರುವಾಗಲೇ, ಬಸ್ಸಿನ 'ಪೋಂ . . . ಪೋಂ' ಶಬ್ದವು ಕೇಳಿಸಿದ್ದರಿಂದ ಅವಸರದಲ್ಲಿ ತಟ್ಟೆಯಲ್ಲಿನ ಕಾಫಿಯನ್ನೆಲ್ಲಾ ಬಗ್ಗಿಸಿ ಬಾಯಿಗೆ ಹೊಯಿದು ಕೊಂಡರು. ಬಿಸಿಯಾದ ಕಾಫಿಯು ಗಂಟ ಲನ್ನು ಸುಟ್ಟುಕೊಂಡು, ಉದರ ಪ್ರದೇಶವನ್ನೂ ಸುಡಹೋಯಿತು. ಆದರೂ ಸಹಿಸಿಕೊಂಡು ಹೋಟೇಲಿನವನಿಗೆ ದುಡ್ಡು ಕೊಟ್ಟು ಬರುವಷ್ಟ ರಲ್ಲಿ, ರಾಯರ ದುರಾದೃಷ್ಟದಿಂದಲೋ ಎಂಬಂತೆ ಬಸ್ಸು ಹೊರಟು ಹೋಗಿತ್ತು.

ಹತಾಶರಾದ ರಾಯರು ಸೊಪ್ಪು (ವೀಳ್ಯದೆಲೆ) ಮೆಲ್ಲುತ್ತಾ ಗುಂಡನ ಅಂಗಡಿಯಲ್ಲಿ ಕುಳಿತುಕೊಂಡರು. ಅರ್ಧ ತಾಸಿನ ಮೇಲೆ ಬಂದ ಮತ್ತೊಂದು ಬಸ್ಸನ್ನು ರಾಯರು ಹೇಗಾದರೂ ಮಾಡಿ ನಿಲ್ಲಿಸಬೇಕೆಂದು ನಿರ್ಧರಿಸಿ, ಮಾರ್ಗದ ನಡುವೆ ನಿಂತುಕೊಂಡರು. ಮತ್ತು ದಾರಿತೋರಿಸುವ ಕೈಕಂಬದಂತೆ ಕೈಯನ್ನು ಊರ್ಧ್ವಕ್ಕೆ ಚಾಚಿದರು.

ಆದರೆ ಡ್ರೈವರನು 'ತಾರಮ್ಮಯ್ಯಾ' ಎಂಬಂತೆ ನಟನೆಮಾಡಿ ಬಸ್ಸನ್ನು ಫಕ್ಕನೆ ಎಡಗಡೆಗೆ ತಿರುಗಿಸಿ, ಓಡಿಸಿಕೊಂಡು ಹೋದನು. ಹಾಗೆ ಆತನು ತಿರುಗಿಸದಿರುತ್ತಿದ್ದರೆ ರಾಯರ ನೂರು ವರ್ಷಗಳು ಆಗಲೇ ತುಂಬಿ, ಊರ ಪಟೇಲರಿಗೆ ತುಂಬಾ ತೊಂದರೆಯ ಕೆಲಸ ಒದಗುತ್ತಿತ್ತು. ಅಂತೂ ಬದುಕಿಕೊಂಡ ರಾಯರು, ಡ್ರೈವರನಿಗೆ ಹೆಕ್ಕಿ, ಆರಿಸಿಟ್ಟುಕೊಂಡಿದ್ದ ಒಳ್ಳೊಳ್ಳೆ ವಾಕ್ಯಗಳನ್ನು ಉಪಯೋಗಿಸಿ ಮಾತಾಡಿ, ಕಾಲುನಡಿಗೆಯಲ್ಲೇ ಮಂಗಳೂರಿಗೆ ತಲಪಿದರು. ಸಿಟ್ಟಿನಿಂದ ಹೊರಡುವಾಗ ಜೋಡನ್ನು ಮನೆಯಲ್ಲೇ ಮರೆತುಬಂದುದರಿಂದ, ಮಾರ್ಗದಲ್ಲಿನ ಕಲ್ಲುಗಳು ತಮ್ಮ ಇರುವಿಕೆಯನ್ನು ರಾಯರಿಗೆ ನೆನಪು ಮಾಡಿದವು.

ಹಾಗೂ ಹೀಗೂ ಮಂಗಳೂರು ಸೇರುವಾಗ ತಾಸು ಹನ್ನೊಂದಾಯಿತು. ಇನ್ನು ವಕೀಲ್ ಮಾಧವಯ್ಯನವರೊಡನೆ ಮಾತಾಡಿ, ಮತ್ತೆ ಬೇಂಕಿಗೆ ಹೋಗಬೇಕೆಂದು ನಿಶ್ಚಯಿಸಿ, ರಾಯರು ನೇರಾಗಿ ವಕೀಲರಲ್ಲಿಗೆ ನಡೆದರು. ಆದರೆ ಬಾಗಿಲಿನಲ್ಲಿ 'Out' ಎಂಬ ನೋಟೀಸಿದ್ದು, ವಕೀಲರಿಲ್ಲವೆಂದು ಸೂಚಿಸುತ್ತಿದ್ದುದರಿಂದ ತಲೆಗೆ ಕೈಹಿಡಿದುಕೊಂಡು, ಬಂದಂತೆಯೇ ಹಿಂದೆ ಹೋದರು.

ರಾಯರ ಅಳಿಯ ಗೋಪಾಲನಿಂದ ರಾಯರಿಗೆ ಸ್ವಲ್ಪ ಹಣ ಬರುವುದಿತ್ತು. ಅದರ ವಸೂಲಿಗಾಗಿ ಅವರು ವಕೀಲರಲ್ಲಿಂದ ಗೋಪಾಲನ ಆಫೀಸಿಗೆ ಹೋದರು. ಅಲ್ಲೊಬ್ಬನು, 'ಗೋಪಾಲ

ರಾಯರೇ ಇಂದು ಇಲ್ಲಿಗೆ ಬರಲಿಲ್ಲ'ವೆಂದನು. ಆಗ ರಾಯರ ವೇದನೆಯ ಪರಿಯು ಅವರಿಗೇ ಕಠಿಣವೆನಿಸಿತು. ಹೋದಲ್ಲೆಲ್ಲಾ ತನ್ನ ಕೆಲಸವಾಗದಿದ್ದುದೇ ಅವರ ವೇದನೆಗೆ ಕಾರಣ.

ಇನ್ನು ಬೇಂಕಿಗೆ ಹೋಗೋಣವೆಂದು ರಾಯರು ತ್ವರ್ಯ ಗತಿಯಿಂದ ಅತ್ತ ಮುಖ ತಿರುಗಿಸಿದರು. ಆದರೆ ಬೇಂಕಿನ ಗೇಟಿನ ಬಳಿ ಬಂದು ಕತ್ತೆತ್ತಿ ನೋಡಲಾಗಿ, ರಾಯರಿಗೆ ಪ್ರಾಣವೇ ಹಾರಿದಂತಾಯಿತು. ಕಾರಣ? ಅಲ್ಲಿ 'ಭಾನುವಾರ; ರಜಾದಿನ' ಎಂದು ಬರೆದ ನೋಟೀಸಿತ್ತು. ಅಂದು ಭಾನುವಾರವೆಂದು ರಾಯರಿಗೆ ಗೊತ್ತಾದುದು ಆಗಲೆ! ತಾನು ಎದ್ದ ಮುಹೂರ್ತವೇ ಒಳ್ಳೇದಲ್ಲವೆಂದು ಭಾವಿಸಿದರು.

ತಾನು ಇಷ್ಟೆಲ್ಲಾ ಗಡಿಬಿಡಿಮಾಡಿಕೊಂಡು, ಹೆಂಡತಿಯನ್ನು ಹೊರಗೆ ಹಾಕಿ, ಬಿಸಿನೀರಿನಿಂದ ಮೈಸುಡಿಸಿಕೊಂಡು, ರೇಜರಿನಿಂದ ಮುಖದ ಚರ್ಮ ಸುಲಿಸಿಕೊಂಡು, ಕಾಫಿಯಿಂದ ಗಂಟಲು ಸುಡಿಸಿಕೊಂಡು, ಬಸ್ಸಿನಡಿಗೆ ಬೀಳುವಂತಾದುದೆಲ್ಲಾ ತನ್ನ ಹೆಡ್ಡುತನವನ್ನು ವ್ಯಕ್ತಪಡಿಸಿತಲ್ಲಾ? ಎಂದು ಬೆರಳನ್ನು ಮೂಗಿನ ಮೇಲೇರಿಸಿದರು.



# ೮. ಇಪ್ಪತ್ತನೇ ಶತಮಾನದ ಆಲೋಚನೆ




ದು ಸೀತಾರಾಮರಾಯರು ಎಂದೂ ಇಲ್ಲದ ಸಂತೋಷದಿಂದೊಡಗೂಡಿ ತವಕದಿಂದ ನಂಬ್ರ ೮ನೇ ಬೀದಿಯಲ್ಲಿ ಮುನ್ನಡೆಯುತ್ತಿದ್ದರು. ಅವರ ಆನಂದವು ಮೇರೆ ತಪ್ಪಿತ್ತೆಂದು ಅವರ ನಿಷ್ಕಾರಣದ ನಗುವು ಸೂಚಿಸುತ್ತಲಿತ್ತು. ದಾರಿಹೋಕರೆಲ್ಲರೂ ರೆಪ್ಪೆ ಬಡಿಯದೆ ರಾಯರನ್ನೇ ನೋಡುತ್ತಲಿದ್ದರು. ಯಾರಿಗೂ ರಾಯರ ಆನಂದದ ಕಾರಣವು ಗೊತ್ತಾಗಲಿಲ್ಲ. ಆದರೂ ಕೆಲವರು ಇವರ ಸಾಹೇಬೀವೇಷವನ್ನು ಕಂಡು, "ಈ ದಿನ ಇವರಿಗೆ ಈ ಜಿಲ್ಲೆಯ ಕಲೆಕ್ಟರರ ಪದವಿ ಸಿಕ್ಕುವ ಹಾಗಿದೆಯೋ ಏನೋ!" ಎಂದೂ, ಇನ್ನು ಕೆಲವರು "ಹಾಗಲ್ಲ, ನಿಮಿಷ ನಿಮಿಷಕ್ಕೂ ಬದಲಾಯಿಸಿಕೊಳ್ಳುವ ಇವರ ವೇಷ-ಭೂಷಣಗಳಿಗೆ "ನೋಬೆಲ್" ಬಹುಮಾನ ಬಂದಿರಲಿಕ್ಕೂ ಸಾಕು" ಎಂತಲೂ, ಮತ್ತೆ ಕೆಲವರು "ನಿಮಗೇನು ಗೊತ್ತು? ಗೋವೆ ಲಾಟರಿಯ "ಫಸ್ಟ್ ಪ್ರ್ಯಾಜ್" ಬಂದಿರಲಿಕ್ಕೂ ಸಾಕು. ಅದೇ ಇವರ ಆನಂದವನ್ನು ಹೆಚ್ಚಿಸಿರಬೇಕು" ಎಂದೂ ತಂತಮ್ಮೊಳಗೆ ಚರ್ಚಿಸುತ್ತಾ, ತಮ್ಮ ಹಾದಿ ಹಿಡಿದು ಸಾಗುತ್ತಿದ್ದರು.

ಆನಂದಾಕಾಶದಲ್ಲಿ ವಿಹರಿಸುತ್ತಿದ್ದ ರಾಯರಿಗೆ, ದಾರಿಗರೆಲ್ಲರೂ ಕೀಟಗಳಿಗಿಂತಲೂ ಕಡೆಯಾಗಿ ಕಾಣುತ್ತಿದ್ದರು. ಈ ಎಡೆಯಲ್ಲಿ ರಾಯರ ಮನಸ್ಸು ಯಾವುದಕ್ಕಾಗಿಯೋ ಆತುರ ಪಡುತ್ತಿತ್ತು. ಆತು

ರದ ಭರದಲ್ಲಿ ಒಮ್ಮೊಮ್ಮೆ ಜೋರಾಗಿ ಹೆಜ್ಜೆ ಇಡುವರು. ಇನ್ನೊಮ್ಮೆ ಆಯಾಸದಿಂದ ಮೆಲ್ಲನೆ ನಡೆಯುವರು. ಅಂತೂ 'ಒಟ್ಟೋದಿಲ್" ಸೆಂಟನ್ನು ವಿಶಾಲ ವಾತಾವರಣದಲ್ಲಿ ತೇಲಿಸುತ್ತಾ, ರಾಯರು ನಂಬ್ರ ೧೦ನೇ ಬೀದಿಯ ೫೪ನೇ ಮನೆಬಾಗಿಲಿಗೆ ಬಂದು ತಟ್ಟನೆ ನಿಂತುಬಿಟ್ಟರು. ಮನೆ ಬಾಗಿಲು ಮುಚ್ಚಿತ್ತು. 'ಸ್ಯಾನುಬೋರ್ಡು' ಮಾತ್ರ, ಅದು ಫೊಟೋಗ್ರಾಫರ್ ರಾಜಾರಾಮರಾಯರ ಮನೆಯೆಂದು ಹೇಳುತ್ತಿತ್ತು.

ರಾಯರು ಬಾಗಿಲು ತಟ್ಟುತ್ತಾ ರಾಜುವನ್ನು ಕರೆದರು. ಪ್ರತಿಧ್ವನಿ ಹೊರತು ಪ್ರತ್ಯುತ್ತರ ಬರಲಿಲ್ಲ. ಎರಡನೇ ಬಾರಿ ಕರೆದರು. ಉತ್ತರವಿಲ್ಲ. ಕಡೆಗೆ ಚಡಪಡಿಸುತ್ತಿದ್ದ ರಾಯರು ಗಂಟಲು ಹರಿವಂತೆ ಕೂಗಿಕೊಂಡರು. ಆಗ ರಾಜು ನಗುಮೊಗದಿಂದ ಬಂದು ಬಾಗಿಲು ತೆರೆದು, ರಾಯರನ್ನು ಒಳಗೆ ಕರದೊಯ್ದನು. ಮತ್ತು "ಸ್ವಾಮಿ, ಬಂದು ಬಹಳ ಹೊತ್ತಾಯಿತೇ? ಕ್ಷಮಿಸಿರಿ" ಎಂದು ರಾಜುವೇ ಪೀಠಿಕೆ ಹಾಕಿದನು. ಚತುಷ್ಪಾದಾಸನ (ಕುರ್ಚಿ)ದ ಮೇಲೆ ಗಂಭೀರವಾಗಿ ಕುಳಿತ ರಾಯರು "ಪರವಾಯಿಲ್ಲ. ನಾನೀಗ ಬಂದ ಕಾರಣ ಹೇಳುವೆನು. ಒಂದು ಫೋಟೋ ತೆಗೆಯಬೇಕಾಗಿದೆ. ಉತ್ತಮವಾದ ಫೋಟಕ್ಕೆ ಏನು ಛಾರ್ಜು ತೆಗಲುವುದು? ಫೋಟೋ ಮಾತ್ರ ಅತ್ಯುತ್ಕೃಷ್ಟವಾಗಿರಬೇಕು." ಎಂದು ಕಣ್ಣಿನ ಕನ್ನಡಕ ಸರಿಪಡಿಸಿಕೊಳ್ಳುತ್ತಾ. ಬೈತಲೆ ತಿದ್ದಿಕೊಳ್ಳುತ್ತಾ, ನುಡಿದರು.

ಫೋಟೋಗ್ರಾಫರ್ ರಾಜು "ರಾಯರೇ, ಬಹಳ ನಾಜೂಕಾಗಿ ತೆಗೆವ ಫೋಟೋಕ್ಕೆ ಹನ್ನೆರಡು ರೂಪಾಯಿ ಕೊಡಬೇಕಾಗುವುದು. ಬಹಳ ಒಳ್ಳೆಯ ಕೆಲಸಮಾಡುವೆನು" ಎಂದನು.

"ಅತೀ ಚಲೋದಾಗಿರಬೇಕು. ನೀವು ತೆಗೆವ ಫೋಟೋದಲ್ಲಿ ಏನೊಂದು ತರದ ಕುಂದೂ ಇರಕೂಡದು. ಬೇಕಾದರೆ ಎರಡು ರೂಪಾಯಿ ಹೆಚ್ಚು ತೆಗೆದುಕೊಳ್ಳಿರಿ" ಎಂದರು ಸೀತಾರಾಮರಾಯರು.

“ರಾಯರೇ, ಇದೇನು ಅಷ್ಟು ವಿಶೇಷ? ನಾನು ತೆಗೆದ ಫೋಟೋಗಳನ್ನು ಇದುವರೆಗೆ ಯಾರೂ ತೆಗಳಲಿಲ್ಲ. ಆದರೆ ನೀವು ಮಾತ್ರ ಬಹಳ ನಾಜೂಕಾಗಬೇಕೆಂದು ಒತ್ತಿ ಹೇಳುವಿರಲ್ಲಾ, ಅದೇನು?” ಎಂದ ರಾಜು.

“ನಾನಿನ್ನು ಬ್ರಹ್ಮಚರ್ಯವನ್ನು ಬಿಟ್ಟು ಗೃಹಸ್ಥಾಶ್ರಮವನ್ನು ಸ್ವೀಕರಿಸಲಿರುವೆನು. ದೊಡ್ಡಬಳ್ಳಾಪುರದ ಲಿಂಗಣ್ಣನವರ ಪುತ್ರಿ ಸೌ। ಸೀತಾದೇವಿಯನ್ನು ಅರ್ಧಾಂಗಿಯನ್ನಾಗಿ ಮಾಡಿಕೊಳ್ಳಲಿರುವೆನು. ಆಕೆ ನನ್ನನ್ನು ಈ ತನಕ ಕಂಡಿಲ್ಲವಾದುದರಿಂದ ಆಕೆಗೆ ನನ್ನ ಫೋಟೋ ಕಳುಹಿಸಬೇಕಾಗಿದೆ. ಆದ್ದರಿಂದಲೇ ಅತೀ ಚಲೋದಾಗಿರಬೇಕೆಂದು ಒತ್ತಿ ಹೇಳಿದೆನು. ಅದು ಸರಿಯಲ್ಲವೇ?” ಎಂದು ಸಿಗರೇಟು ಸೇದುತ್ತಾ ರಾಯರ ಪ್ರಶ್ನೆ.

“ಸರಿ, ಸರಿ. ಅದಕ್ಕೇನು ಅಡ್ಡಿ? ಕುರ್ಚಿಯಲ್ಲಿ ಸರಿಯಾಗಿ ಕುಳಿತು ಕೊಳ್ಳಿರಿ” ಎಂದು ರಾಜು, ಫೋಟೋ ತೆಗೆಯಲು ಕ್ಯಾಮರಾ ನಿಲ್ಲಿಸಿ ಅಣಿ ಮಾಡಿದನು. ಆಗ ಫಕ್ಕನೇ ರಾಜು “ರಾಯರೇ, ನಿಮ್ಮ ಮುಖದ ಮೇಲೆ ತುಂಬಾ ವೈಲಿಗೆಯ ಕಲೆಗಳಿರುವುದರಿಂದ ಫೋಟೋದಲ್ಲಿ ಅವು ಬರಲೂ ಬಹುದು. ಮತ್ತೆ ಸಿಟ್ಟಾಗಬೇಡಿರಿ” ಎಂದನು.

“ಕೂಡದು. ಹಾಗಾಗಕೂಡದು.” ಎಂದು ರಾಯರು ಸ್ವಲ್ಪ ಗಟ್ಟಿಯಾಗಿಯೇ ಹೇಳಿದರು.

“ರಾಯರೇ, ಅದಕ್ಕೇನು ಉಪಾಯ ಮಾಡಲಿ? ಕೆನ್ನೆಗೊಂದು ಕರವಸ್ತ್ರವನ್ನಾದರೂ ಹಿಡಿದು ಕೊಳ್ಳಿರಿ. ಆಗ ಕಲೆಗಳು ಕಾಣಲಾರವು” ಎಂದನು ರಾಜು.

“ಛೇ, ಕೆನ್ನೆಗೆ ಕರವಸ್ತ್ರ ಹಿಡಿದರೆ ಅಳುವವರಂತೆ ಕಾಣುವುದಿಲ್ಲವೇ? ಅದಕ್ಕೆ ನಾನೊಂದು ಉಪಾಯ ಹೇಳುವೆನು. ಕುತ್ತಿಗೆ

ಯಿಂದ ಮೇಲಿನ ಭಾಗವನ್ನು ಫೊಟೋದಲ್ಲಿ ಕಾಣಿಸುವುದೇ ಬೇಡ. ಆಗ ಕಲೆಗಳ ಗುರುತು ಹೇಗೆ ಕಾಣುವವೋ ನೋಡೋಣ?" ಎಂದು ರಾಯರು ನಿಜವಾಗಿಯೇ ನುಡಿದರು.

"ಆಗ ತಾನೇ ಆತ್ಯುತ್ತಮ ಫೊಟೋ ಬರುವುದಲ್ಲದೆ ರಾಮಾಯಣ ಕಾಲದ ಕಬಂಧನನ್ನು ಪ್ರತ್ಯಕ್ಷ ನೋಡುವ ಸುಯೋಗವು ಬರುವುದಲ್ಲವೇ? ಸೀತಾದೇವಿಯು ನಿಮ್ಮನ್ನು ಖಂಡಿತವಾಗಿ ವರಿಸುವಳಲ್ಲವೇ? ಇದೀಗ ಇಪ್ಪತ್ತನೇ ಶತಮಾನಕ್ಕೆ ಒಪ್ಪತಕ್ಕ ಆಲೋಚನೆ" ಎಂದು ರಾಜು ಎದ್ದು ಬಿದ್ದು ನಕ್ಕನು. ರಾಯರು ಬೆಪ್ಪಾಗಿ ನೋಡ ತೊಡಗಿದರು.



# ೯ “ಒಂದಾಗಿ ಬಂದೆವು”



ಬಿಗಾಡಿ ಹೊರಡಲು ಇನ್ನೂ ಅರ್ಧ ತಾಸಿನ ವೇಳೆಯಿತ್ತು. ರಮೇಶನು “ವೈಟಿಂಗ್ ರೂಮಿ” ನಲ್ಲಿ ಕುಳಿತುಕೊಂಡು ಸಮಯವನ್ನೆಣಿಸುತ್ತಿದ್ದನು. ಅಲ್ಲಿ ಆಗ ವಿಶೇಷ ಗಲಭೆ ಇರಲಿಲ್ಲ. ರಮೇಶನ ಹತ್ತಿರವೇ ಇನ್ನೊಂದು ಆಸನದ ಮೇಲೆ ಹುಡುಗಿಯೊಬ್ಬಳು ಕುಳಿತು ಏನನ್ನೋ ಯೋಚಿಸುತ್ತಿದ್ದಳು. ನೋಡಿದರೆ ಇನ್ನೂ ಅವಿವಾಹಿತಳೆಂದೇ ಹೇಳಬಹುದಾಗಿತ್ತು.

ಸ್ವಲ್ಪ ಹೊತ್ತಿನ ಮೇಲೆ ಆಕೆಯು ರಮೇಶನನ್ನೇ ನೆಟ್ಟದೃಷ್ಟಿಯಿಂದ ನೋಡತೊಡಗಿದಳು. ಮತ್ತು ಕೇವಲ ಆತ್ಮೀಯರೊಡನೆ ಮಾತಾಡುವಂತೆ, ರಮೇಶನೊಡನೆ ಆಂಗ್ಲಭಾಷೆಯಲ್ಲಿ “ಅಪರಿಚಿತ ಸಭ್ಯರೇ, ಕಾಸರಗೋಡಿಗೆ ರೈಲ್ವೇ ಛಾರ್ಜು ಎಷ್ಟು?” ಎಂದು ಕೇಳಿದಳು. ರಮೇಶನು ಅವಾಕ್ಕಾಗಿ ಆಕೆಯನ್ನೇ ನೋಡತೊಡಗಿದನು. ನಾಲ್ಕು ಕಣ್ಣುಗಳೂ ಒಂದಾದವು. ಇಬ್ಬರ ನೋಟಗಳಲ್ಲಿಯೂ ಒಂದು ಬಗೆಯ ಮೋಹವಿತ್ತು. ಹುಡುಗಿಗೆ ಇನ್ನೂ ಹದಿನಾರು ವರುಷ ದಾಟಿರಲಿಲ್ಲ. ಅತಿ ರೂಪವತಿಯು, ಆಂಗ್ಲಭಾಷಾ ಪರಿಚಯ ಉಳ್ಳ ವಿದ್ಯಾವಂತೆಯು. ರಮೇಶನು ತನ್ನ ಸ್ಥಿತ್ಯಂತರವನ್ನು ಬೇಗನೇ ಮರೆಮಾಡಿಕೊಂಡು, “ಸಭ್ಯಸ್ತ್ರೀಯೇ, ಟಿಕೇಟೊಂದರ ಎಂಟಾಣೆ ಮೂರು ಪೈ” ಎಂದನು. ಆಗ ಜನರು ಟಿಕೇಟಿಗಾಗಿ ನುಗ್ಗಾಟ ಮಾಡಲಾರಂಭಿಸಿದರು. ಅದನ್ನು ತೋರಿಸುತ್ತಾ ಆ ಚೆಲುವೆಯು

"ಸಭ್ಯಗೃಹಸ್ಥರೇ, ಈಗ ನಾನೊಬ್ಬಳೇ ಇರುವೆನು. ಜನರ ಗುಂಪಿನೆಡೆಗೆ ಹೋಗಿ ಟಿಕೇಟು ತರುವುದು ನನ್ನಿಂದಾಗದ ಕೆಲಸ. ದಯವಿಟ್ಟು ನನಗಾಗಿ ಒಂದು ಟಿಕೇಟು ತೆಗೆದುಕೊಡುವಿರಾ?" ಎಂದು ಹಣವನ್ನು ಕೊಟ್ಟು, ಒಂದು ಕಡೆಗಣ್ಣ ನೋಟವನ್ನು ರಮೇಶನೆಡೆಗೆ ಬೀರಿದಳು. ರಮೇಶನು ಆಕೆಯ ಚೆಲುವಿಕೆಗೆ ಸೋತುಹೋದನು.

"ಅದಕ್ಕೇನು? ಅಷ್ಟನ್ನೂ ಮಾಡಲಾರದವನು ಮನುಷ್ಯನೆನಿಸುವನೇ?" ಎನ್ನುತ್ತಾ, ರಮೇಶನು ಆಕೆಯ ಹಣವನ್ನು ಆಕೆಗೇ ಕೊಟ್ಟು ಬಿಟ್ಟು, ಟಿಕೇಟು ತರಲು ಹೋದನು.

ರಮೇಶನು ಬಿ. ಎ. ತರಗತಿಯಲ್ಲಿ ಓದುವ ವಿದ್ಯಾರ್ಥಿಯು. "ಕ್ರಿಸ್‌ಮಸ್" ರಜೆಯಲ್ಲಿ ಮನೆಗೆ ಹೋಗಲು ಹೊರಟಿದ್ದನು. ಉಳ್ಳಾಲವೇ ಅವನ ಹುಟ್ಟೂರು. ಆದರೆ ಸುಂದರಿಯ ಮಾತಿಗೆ ಸೋತು, ಆಕೆಯಲ್ಲಿ ಮೋಹಗೊಂಡ ರಮೇಶನು, ತಾನೂ ಕಾಸರಗೋಡಿಗೆ ಹೋಗಬೇಕೆಂದೂ, ಆಕೆಯೊಡನೆ ಸ್ನೇಹಿತನೊಬ್ಬನ ಮನೆಗೆ ಹೋಗಲಿರುವುದೆಂದು ಹೇಳಬೇಕೆಂದೂ ನಿಶ್ಚಯಿಸಿ, ಕಾಸರಗೋಡಿಗೆ ಎರಡು ಟಿಕೇಟುಗಳನ್ನು ಕೊಂಡುಕೊಂಡು, ಒಂದನ್ನು ಆಕೆಗೆ ಕೊಟ್ಟು, ಆಕೆಯ ಕೃತಜ್ಞತೆಯನ್ನು ನಗುಮೊಗದಿಂದ ಸ್ವೀಕರಿಸಿದನು. ಇಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸತೊಡಗಿದರು.

ಅಷ್ಟರಲ್ಲಿ ಕಾಸರಗೋಡಿಗೆ ಹೋಗುವ ರೈಲು ಸಜ್ಜಾಗಿ ನಿಂತಿತು. ರಮೇಶನೂ, ಆ ಸುಂದರಿಯೂ ಒಂದೇ ಗಾಡಿಯಲ್ಲಿ ಕುಳಿತುಕೊಂಡರು. ಒಟ್ಟು ಕುಳಿತುಕೊಂಡ ಸುಂದರಿಯ ಮೈಯ್ಯ ಸ್ಪರ್ಶದಿಂದ ರಮೇಶನಿಗೆ ಸ್ವರ್ಗಸುಖಾನುಭವವಾದಂತಾಯಿತು. ಆಕೆಯ ಇಷ್ಟು ಸಲುಗೆಯ ವರ್ತನೆಯು ಅವನನ್ನು ಚಕಿತನನ್ನಾಗಿ ಮಾಡಿತು. ಆಕೆಯ ಸ್ಥಿತಿಯಾದರೂ ಇದೇ ಆಗಿತ್ತು.

ಉಗಿ ಬಂಡಿಯು ಉಗಿಯನ್ನು ಕಾರುತ್ತಾ, ವಿಕಾರವಾಗಿ ಚೀರುತ್ತಾ, ಸ್ಟೇಷನು ಬಿಟ್ಟು ಹೊರಟಿತು. ಇತ್ತ ರಮೇಶನು ಸಂಭಾಷಣೆಗೆ ಪ್ರಾರಂಭಿಸಿದನು.

"ಎಲೋ, ಸುಂದರಿ! ನಿನ್ನ ಹೆಸರೇನು? ನಿನ್ನ ಊರು ಯಾವುದು? ಎಲ್ಲಿಂದ ಬಂದಿರುವಿ?" ಎಂದು ಧೈರ್ಯದಿಂದ ಆಕೆಯ ಮೈ ಸವರುತ್ತಾ ಕೇಳಿದನು. ಆ ಗಾಡಿಯಲ್ಲಿ ಬೇರೆ ಯಾರೂ ಇಲ್ಲದಿದ್ದುದು ಇವರಿಗೆ ಬಹಳೇ ಅನುಕೂಲವಾಯಿತು. ರಮೇಶನ ಕೈಯನ್ನು ದೂಡುವಷ್ಟು ಧೈರ್ಯವು ಆ ಸುಂದರಿಗೆ ಬರಲಿಲ್ಲ. ಆಕೆಯು "ನನ್ನ ಹೆಸರು ಲೀಲಾ; ನಾನು ಮಂಗಳೂರಿಗೆ ನನ್ನ ಅಕ್ಕನ ಮನೆಗೆ ಬಂದಿದ್ದು, ಈಗ ಸ್ವಗೃಹಕ್ಕೆ ಹೋಗುತ್ತಿರುವೆನು" ಎಂದು ಹೇಳಿ ಲಜ್ಜೆಯಿಂದ ತಲೆಬಾಗಿಸಿದಳು. ಮತ್ತು ಓರೆಗಣ್ಣಿನಿಂದ ರಮೇಶನನ್ನು ನೋಡುತ್ತಾ "ತಮ್ಮ ವಿಚಾರ ತಿಳಿಸಬಹುದೇ?" ಎಂದಳು.

ಆನಂದ ಸಮುದ್ರದಲ್ಲಿ ವಿಹರಿಸುತ್ತಿದ್ದ ರಮೇಶನು, ತನ್ನ ಪರಿಚಯವನ್ನು ಆಕೆಗೆ ಹೇಳಿ, "ನಾನೀಗ ಕಾಸರಗೋಡಿನ ಒಬ್ಬ ಮಿತ್ರನಲ್ಲಿಗೆ ಹೋಗಲು ಹೊರಟಿರುವೆನು" ಎಂದು, ಉಳ್ಳಾಲಕ್ಕೆ ಹೊರಟ ರಮೇಶನು ಸುಳ್ಳೇ ಹೇಳಿದನು. ಲೀಲೆಯು ಆನಂದದಿಂದ ಮೈಮರೆತು ಫಕ್ಕನೆ ರಮೇಶನ ತೊಡೆಯ ಮೇಲೆ ಬಿದ್ದುಬಿಟ್ಟಳು.

ಹಬೆಯಂತ್ರವು ತನ್ನ ಕೆಲಸವನ್ನು ಒಂದೇ ಸಮನೆ ಮಾಡುತ್ತಿತ್ತು. ರಮೇಶನು ಆಕೆಯನ್ನು ತಬ್ಬಿಕೊಂಡು ಮುತ್ತಿಟ್ಟು, ಎಚ್ಚರಿಸಿ, "ಲೀಲಾ, ನಿನ್ನನ್ನು ನೋಡಿದಾಗಿನಿಂದ ನನಗೆ ನಿನ್ನ ಮೇಲೆ ತುಂಬಾ ಮೋಹ ಬಿದ್ದಿದೆ. ನನ್ನ ಇಂದ್ರಿಯಗಳು ನನ್ನಂಕೆಯನ್ನು ಮೀರಿರುವವು. ನಿನ್ನ ಅಪ್ಪಣೆಯಿಲ್ಲದೆ ಮುತ್ತಿಟ್ಟುದು ನನ್ನ ಮಹಾ ಅಪರಾಧವು" ಎಂದನು. ಲೀಲೆಯು ನಗುತ್ತಾ "ಅದರ ಪ್ರಾಯಶ್ಚಿತ್ತಕ್ಕಾಗಿ ನೀವು ನಿಮಗೆ ತೃಪ್ತಿ

ಯಾಗುವಂತೆ ಮುದ್ದಿಸಬೇಕು." ಎಂದು ರಮೇಶನ ಬಾಹುಪಾಶಗಳೆಡೆಯಿಂದ ನುಡಿದಳು. ರಮೇಶನ ಹರ್ಷಕ್ಕೆ ಪಾರವುಂಟೇ?

ಆಗ ರೈಲು, ಕಾಸರಗೋಡು ಸ್ಟೇಷನಿನಲ್ಲಿ ಬಂದು ನಿಂತಿತು. ಇದರಿಂದ ರಮೇಶನಿಗೆ ತುಂಬಾ ದುಃಖವಾಯಿತು "ಪ್ರಿಯೇ, ರೈಲು ಇಲ್ಲಿಗೆ ತಲಪಲು ಇನ್ನಷ್ಟು ವೇಳೆಯಾಗುತ್ತಿದ್ದರೆ ಚೆನ್ನಾಗಿತ್ತಲ್ಲವೇ? ಆಗಲಿ; ಲೀಲಾ, ಇನ್ನು ನಾನು ನಿನ್ನನ್ನು ಎಲ್ಲಿ ಕಾಣಲಿ?" ಎಂದು ರಮೇಶನು ಸಂಕಟದಿಂದ ನುಡಿದನು. ಲೀಲೆಯು "ಪ್ರಿಯಾ, ನಮ್ಮ ಮನೆಗೇ ಹೋಗೋಣ, 'ಕ್ರಿಸ್‌ಮಸ್'' ರಜೆಯನ್ನು ಆನಂದದಿಂದ ಕಳೆಯೋಣ" ಎಂದಳು. ಇಬ್ಬರೂ ಗಾಡಿಯಿಂದ ಕೆಳಗಿಳಿದರು. ರೈಲು ಹೊರಟು ಹೋಯಿತು.

ಸ್ಟೇಷನಿನಲ್ಲಿ ಲೀಲೆಯ ಅಣ್ಣ ಸುರೇಶನು ಆಕೆಗಾಗಿ ಕಾದಿದ್ದನು. ಆಕೆಯು ತನ್ನ ಸ್ನೇಹಿತ ರಮೇಶನೊಡನೆ ಇರುವುದನ್ನು ಕಂಡು ಆಶ್ಚರ್ಯದಿಂದ ಸಮೀಪಕ್ಕೆ ಬಂದನು. ಮತ್ತೆ ರಮೇಶನಿಗೆ ಹಸ್ತಲಾಘವ ಕೊಟ್ಟು, ಆತನ ಯೋಗಕ್ಷೇಮವನ್ನು ವಿಚಾರಿಸಿದನು. ಕಡೆಗೆ "ರಮೇಶ, ನಮ್ಮ ಲೀಲೆಯು ನಿನಗೆಲ್ಲಿ ಸಿಕ್ಕಿದಳು? ಅವಳ ಪರಿಚಯವಾಯಿತೇ? ನೀವು ಒಂದಾಗಿ ಬಂದಿರೇ?" ಎಂದು ನಗುತ್ತಾ ಕೇಳಿದನು.

ರಮೇಶನಿಗೆ ದೊಣ್ಣೆ ಏಟು ಬಿದ್ದಂತಾಯಿತು. ತನ್ನ ಗುಟ್ಟು ರಟ್ಟಾಯಿತೆಂದು ಮರುಗಿದನು. ಕಷ್ಟದಿಂದ ವ್ಯಸನವನ್ನು ಮುಚ್ಚಿಕೊಂಡು, "ಹೌದು ಮಂಗಳೂರಿನಿಂದಲೇ ನಾವು ಒಂದಾಗಿ ಬಂದೆವು." ಎಂದು ತಡವರಿಸುತ್ತಾ ಹೇಳಿದನು. ಲೀಲೆಯೂ ರಮೇಶನಂತೆ ಮಿಡುಕಲಾರಂಭಿಸಿದಳು. ಸುರೇಶನು ಮುಗುಳ್ನಗುತ್ತಾ "ತಂಗೀ ಲೀಲಾ, ಬಾ; ರಮೇಶಾ, ಹೋಗೋಣ" ಎಂದನು.

ಲೀಲೆಯು, ತನ್ನ ಸ್ನೇಹಿತ, ಸುರೇಶನ ತಂಗಿಯೆಂದು ತಿಳಿದ ಮೇಲೆ ರಮೇಶನು ಕಳೆಗುಂದಿದನು. ರಮೇಶನು ತನ್ನಣ್ಣನ ಗೆಳೆಯನೆಂದು ತಿಳಿದ ಲೀಲೆಯು ಸತ್ತ್ರಂತಾಗಿ ಬಿಟ್ಟಳು.

ಸತ್ಯ ಸಂಗತಿಯನ್ನು ಇವರಿಬ್ಬರ ಮುಖಭಾವಗಳಿಂದ ತರ್ಕಿಸಿ ಕೊಂಡ ಸುರೇಶನು ನಗುತ್ತಾ, "ರಮೇಶ, ಲೀಲಾ, ನೀವು ವ್ಯಸನ ಪಡುವ ಕಾರಣವಿಲ್ಲ. ನಾನು ಅಪ್ಪನೊಡನೆ ಹೇಳಿ, ಒಂದಾಗಿ ಬಂದ ನೀವು ಒಂದಾಗಿರುವಂತೆಯೇ ಮಾಡುವೆನು." ಎಂದು ಅವರಿಬ್ಬರ ಕೈಗಳನ್ನು ಒಂದು ಮಾಡಿದನು.

ಲೀಲಾ-ರಮೇಶರಿಗೆ ಸಂತೋಷವೂ, ವ್ಯಸನವೂ, ಒಟ್ಟಾಗಿಯೇ ಉಂಟಾಯಿತು.



# ೧೦. ಜಠರಾಗ್ನಿ!




ಗಪ್ಪನು ಬಹಳ ಬಡವನಾಗಿದ್ದನು. ಮಾತ್ರವಲ್ಲದೆ ಮನೆಯಲ್ಲಿ ಹೆಂಡತಿ ತುಂಗಮ್ಮ ಮತ್ತು ಒಂದು ಡಜನ್ ಮಕ್ಕಳಿದ್ದವು, ಕೆಲವು ಸಮಯದ ಹಿಂದೆ ಹೆಂಚಿನ ಕಾರ್ಖಾನೆಯಲ್ಲಿದ್ದ ಕೆಲಸವೂ ಹೋದುದರಿಂದ ಲಿಂಗಪ್ಪನು ತನ್ನ ಸಂಸಾರವನ್ನು ರಕ್ಷಿಸದಾದನು. ಬೇರೆಲ್ಲಿಯೂ ಕೆಲಸ ಸಿಗಲಿಲ್ಲ. ಎಲ್ಲಾ ಧನಿಕರ ಅಂಗಡಿ ಮನೆಗಳ ಮೆಟ್ಟಲುಗಳನ್ನು ತುಳಿದುದಾಯಿತು. ಕೆಲಸವಿಲ್ಲೆಂದಾಯಿತು. ಹೀಗಾಗಿ ಹೊಟ್ಟೆಗೆ ಅನ್ನವಿಲ್ಲದಂತಾಯಿತು. ಮನೆಯಲ್ಲಿದ್ದ ಪಾತ್ರೆ ಸಾಮಾನುಗಳನ್ನೂ, ಚಿನ್ನಾಭರಣಗಳನ್ನೂ ಮಾರಿ, ಉಂಡು ಮುಗಿಸಿದಾಯಿತು. ಇನ್ನು ಮನೆಯಲ್ಲಿ ಒಂದು ಕಾಳು ಅಕ್ಕಿಯೂ ಉಳಿಯಲಿಲ್ಲ. ಆದರೆ ಈ ಎಲ್ಲಾ ಕಷ್ಟಗಳನ್ನು ತುಂಗಮ್ಮನು ಬಹಳ ತಾಳ್ಮೆಯಿಂದ ಸಹಿಸುತ್ತಿದ್ದಳು. ತುಂಗಮ್ಮನು ನೆರೆಹೊರೆಯವರಿಂದ ಅಕ್ಕಿ ಸಾಮಾನುಗಳನ್ನು ಸಾಲ ತಂದಳು. ಅವೂ ಕೆಲವು ದಿನಗಳಲ್ಲಿ ಮುಗಿದು ಮತ್ತೆ ಸಾಲವೂ ಸಿಗದಾಯಿತು. ತಿಂಗಳಲ್ಲಿ ಇಪ್ಪತ್ತೆಂಟು ಏಕಾದಶಿಗಳು ಬರತೊಡಗಿದವು. ಹೊಟ್ಟೆ ಹಸಿವೆಗಾಗಿ ಲಿಂಗಪ್ಪನು ಪುನಃ ಕೆಲಸ ಹುಡುಕಲು ಹೋದನು. ಆದರೆ ಅವನ ದುರಾದೃಷ್ಟದಿಂದ ಯಾರೂ ಆತನನ್ನು ಕೆಲಸಕ್ಕಿಟ್ಟುಕೊಳ್ಳಲಿಲ್ಲ. ಲಿಂಗಪ್ಪನಿಗೆ ಹಗಲು ಮಾರ್ಗ ಅಳೆವ ಕೆಲಸ, ರಾತ್ರೆ ಅನ್ನಕ್ಕಾಗಿ ಅಳುವ ಮಕ್ಕಳನ್ನು ಸಂತೈಸುವ ಕೆಲಸ. ಹೀಗಾಗಿ ಲಿಂಗಪ್ಪನು ದಿನೇ ದಿನೇ ಕ್ಷೀಣವಾಗುತ್ತಾ ಬಂದನು. ಶರೀರದಲ್ಲಿ ಎಲುಬೂ, ಚರ್ಮವೂ, ಮಾತ್ರ ಉಳಿದವು. ಈಗ ಲಿಂಗಪ್ಪನ ಅವಸ್ಥೆಯನ್ನು ಹೇಳಬರುವಂತಿಲ್ಲ.

ಒಂದು ದಿನ ಮಧ್ಯಾಹ್ನ ಸಮಯ. ಬಿಸಿಲಿನ ತಾಪವು ಬಹಳ ಹೆಚ್ಚಾಗಿತ್ತು. ರಸ್ತೆಯಲ್ಲಿ ಜನರ ಸುಳಿವಿಲ್ಲ. ಸೂರ್ಯನು ಆಕಾಶದ ಮಧ್ಯದಲ್ಲಿದ್ದು ಒಂದೇ ಸವನೆ ಉರಿಯುತ್ತಿದ್ದನು. ಲಿಂಗಪ್ಪನ ಮನೆಯಲ್ಲಿ ಒಲೆ ಹೊತ್ತಿಸದೆ ಅಂದಿಗೆ ಮೂರು ದಿನಗಳಾಗಿದ್ದುವು. ಹಸಿವೆಯಿಂದ ಕಂಗೆಟ್ಟ ಮಕ್ಕಳು ಅತ್ತು ಅತ್ತು ನೆಲದ ಮೇಲೆ ಬಿದ್ದುಕೊಂಡಿದ್ದುವು. ಇಡೀ ಮನೆಯನ್ನು ಅಡಿಮೇಲು ಮಾಡಿ ಹುಡುಕಿ, ಸಿಕ್ಕಿದ ಒಂದು ತುಂಡು ಬೆಲ್ಲವನ್ನು ಒಂದು ಪಾತ್ರೆಯಲ್ಲಿ ಹಾಕಿ, ಸ್ವಲ್ಪ ನೀರು ಹೊಯಿದು, ಪಾತ್ರೆಯನ್ನು ಒಲೆಯ ಮೇಲಿಟ್ಟು ತುಂಗವ್ವನು ಒಲೆಗೆ ಬೆಂಕಿ ಹಚ್ಚುತಿದ್ದಳು.

ಕೆಲಸ ಹುಡುಕಿಕೊಂಡು ಹೋದ ಲಿಂಗಪ್ಪನು ಎರಡು ಕೈಗಳಿಂದಲೂ ಮುಖದ ಮೇಲಿನ ಬೆವರನ್ನು ಒರೆಸಿಕೊಳ್ಳುತ್ತಾ, ಮನೆಯ ಕಡೆಗೆ ಬರುತಿದ್ದನು. ಅವನ ಮುಖವಾದರೋ ಮಸಿಯಂತೆ ಕಪ್ಪು ಬಡೆದಿತ್ತು. ಹೋದ ಕೆಲಸವು ಜಯಪ್ರದವಾಗಲಿಲ್ಲವೆಂದು ಅವನ ಆ ಬಾಡಿದ ಮುಖವೇ ಸಾಕ್ಷಿ ಹೇಳುತ್ತಿತ್ತು. ಲಿಂಗಪ್ಪನಿಗೆ ಇಡೀ ಲೋಕವೇ ಶೂನ್ಯವಾಗಿ ಕಾಣಿಸಿತು. ಅವನಿಗೆ ಕಣ್ಣುಕತ್ತಲೆ ಬಂದಂತಾಯಿತು. ಆದರೆ ಬೇಗಬೇಗನೇ ಮನೆ ದಾರಿಹಿಡಿದು ಹೋಗುತ್ತಿದ್ದನು.

ತುಂಗವ್ವನು ಒಲೆಹಚ್ಚುವಾಗ ಎದ್ದ ಹೊಗೆಯು ಮಾಡಿನ ಹುಲ್ಲಿನೆಡೆಯಿಂದ ಮೇಲೆದ್ದು ಹೋಗುತ್ತಿದ್ದುದು, ದೂರದಿಂದ ಬರುತ್ತಿದ್ದ ಲಿಂಗಪ್ಪನಿಗೆ ಕಾಣಿಸಿತು. ಅದನ್ನು ನೋಡಿದೊಡನೆ ಲಿಂಗಪ್ಪನಿಗೆ ಒಂದು ಆಲೋಚನೆ ಹೊಳೆದು ಸಟ್ಟನೆ ಮನೆಯೊಳಹೊಕ್ಕು ನೋಡಿದನು. ಹೆಂಡತಿಯು ಒಲೆ ಹೊತ್ತಿಸುತ್ತಿರುವುದು ಕಂಡಿತು. ಅವನು ಏನೂ ಮಾತಾಡದೆ ಅಲ್ಲಿಂದ ಮಾರ್ಗಕ್ಕೆ ಇಳಿದನು.

ಮಾರ್ಗಕ್ಕೆ ಬಂದವನೇ ತಲೆಗೊಂದು ಕೈಯನ್ನೂ, ಹೊಟ್ಟೆಗೊಂದು ಕೈಯನ್ನೂ ಹಿಡಿದುಕೊಂಡು, ತನ್ನ ಶಕ್ತಿಯನ್ನೆಲ್ಲಾ ಉಪ

ಯೋಗಿಸಿ "ಬೆಂಕಿಯೋ, ಬೆಂಕಿ! ಓಡಿ ಬನ್ನಿರಿ!! ಬೇಗ ಬನ್ನಿರಿ!! ಬೆಂಕಿ ಯಪ್ಪಾ! ಬೆಂಕಿ!" ಎಂದು ಚೀರತೊಡಗಿದನು.

ಈ ಬೊಬ್ಬೆ ಕೇಳಿ ನಾಲ್ಕು ಕಡೆಗಳಿಂದಲೂ ಜನರು ಓಡಿಬಂದರು. ಕೆಲವರು "ಫಾಯರ್ ಎಂಜಿನ್" ತರಲು ಅತ್ತ ಓಡಿದರು. ಕೆಲವರು ಬಿಂದಿಗೆ ಹುಡುಕಹೋದರು. ನಿಮಿಷಾರ್ಧದಲ್ಲಿ ಸಾವಿರಾರು ಜನರು ಲಿಂಗಪ್ಪನ ಮನೆಯೆದುರು ಕಲೆತು ಬಿಟ್ಟರು. ಮನೆಯ ಮಾಡಿನಲ್ಲಿ ಹೊಗೆ ಏಳುತಿತ್ತು. ಅಷ್ಟರಲ್ಲಿ ಬೆಂಕಿ ಆರಿಸುವ ಯಂತ್ರವೂ ಬಂದು ಬಿಟ್ಟಿತು. ಕೆಲವು ಧೈರ್ಯಶಾಲಿಗಳು ಮನೆಯೊಳಗೆ ಹೊಕ್ಕು ನೋಡಿ ದರು. ಏನನ್ನು! ತುಂಗಮ್ಮನೂ ಮಕ್ಕಳೂ ಒಲೆಯ ಬದಿಯಲ್ಲಿ ಬಿದ್ದಿದ್ದರು. ಒಲೆಯಲ್ಲಿ ಬೆಂಕಿಯು ನಿಧಾನವಾಗಿ ಉರಿಯುತಿತ್ತು.

ಎಲ್ಲರಿಗೂ ಬೆಂಕಿ ಎಲ್ಲಿದೆಯೆಂಬ ಆಶ್ಚರ್ಯ. ಲಿಂಗಪ್ಪನು ಪಿಳಿ ಪಿಳಿ ನೋಡುತ್ತಿದ್ದನು. ಆಗ ನೆರೆದವರಲ್ಲೊಬ್ಬನು ಲಿಂಗಪ್ಪನನ್ನು ಕರೆದು, "ಬೆಂಕಿ ಎಲ್ಲಿದೆ? ಎಲ್ಲಿ ಹೊತ್ತಿತು? ಸುಮ್ಮನೆ ಬೊಬ್ಬೆಟ್ಟೆ ಯಲ್ಲಾ? ಬೆಂಕಿ ತೋರಿಸು" ಎಂದು ಗದರಿಸಿದನು. ಎಲ್ಲರೂ ತವಕ ದಿಂದಲೂ, ಸಿಟ್ಟಿನಿಂದಲೂ ಲಿಂಗಪ್ಪನನ್ನೇ ನೋಡುತ್ತಿದ್ದರು. ಆಗ ಲಿಂಗಪ್ಪನು ತನ್ನ ಹೊಟ್ಟೆಯನ್ನು ತೋರಿಸುತ್ತಾ "ಪ್ರಿಯ ಬಾಂಧವರೇ, ಯಾರೂ ನನಗೊಂದು ಕೆಲಸ ಕೊಡುವ ಕರುಣೆ ತೋರಿಸಲಿಲ್ಲ. ಅದ ರಿಂದ ಊಟಕ್ಕಿಲ್ಲದೆ ಈಗ ಹೊಟ್ಟೆಯಲ್ಲಿ ಬೆಂಕಿ ಎದ್ದಿದೆ. ಇದರಿಂದಾಗಿ ನನ್ನ ಇಡೀ ಕುಟುಂಬವು ಆಹುತಿಯಾಗಲಿದೆ. ಅಯ್ಯೋ ತಡೆಯಲಾರೆ ನಪ್ಪಾ!" ಎಂದು ಮೂರ್ಛೆ ಹೋಗಿ ಬಿದ್ದು ಬಿಟ್ಟನು. ಲಿಂಗಪ್ಪನ ಮಾತು ಕೇಳಿ ಎಲ್ಲರಿಗೆ ತಡೆಯಲಾಗದ ನಗುವೂ, ಅವನ ಸ್ಥಿತಿನೋಡಿ ಮರುಕವೂ ಉಂಟಾಯಿತು. ಎಲ್ಲರೂ ಕಣ್ಣುಗಳನ್ನೊರಸಿಕೊಂಡರು.

ಆಗ ಸಾಹುಕಾರ ರಂಗಪ್ಪನವರು ಎದುರು ಬಂದು, ಲಿಂಗಪ್ಪ ನನ್ನು ಎಬ್ಬಿಸಿ, ವೈಸವರುತ್ತಾ, "ತಮ್ಮಾ, ಲಿಂಗಪ್ಪ, ಬಡತನದಿಂದ

ಬಳಲಿ ಬೆಂಡಾದೆಯೋ? ಜಠರಾಗ್ನಿಯು ಹೊತ್ತಿಕೊಂಡಿತೇ? ಇನ್ನು ಮುಂದೆ ಹೆದರಬೇಡ. ಅಂತಹ ಜ್ವಾಲಾಮುಖಿ ಏಳದಂತೆ ಮಾಡು ವೆನು" ಎಂದು ಸಮಾಧಾನ ಪಡಿಸಿದರು. ಲಿಂಗಪ್ಪನ ಮನೆಯವ ರೆಲ್ಲರೂ ಅಂದು ರಂಗಪ್ಪನವರ ಹೆಸರು ಹೇಳಿ ಉಂಡರು. ಸಾಹುಕಾರ ರಂಗಪ್ಪನವರು ಮತ್ತೂ ಬೇಕಷ್ಟು ಅಡಿಗೆ ಪದಾರ್ಥಗಳನ್ನು ಕಳುಹಿಸಿ ಕೊಟ್ಟರು. ಅದಲ್ಲದೆ ಅಂದಿನಿಂದ ಲಿಂಗಪ್ಪನನ್ನು ಇಪ್ಪತ್ತು ರೂಪಾಯಿ ಗಳ ಸಂಬಳಕ್ಕೆ ತನ್ನಲ್ಲೇ ಇಟ್ಟುಕೊಂಡರು.

* * * * * * *

ಈಗಲಾದರೋ ಲಿಂಗಪ್ಪನು ಸುಖವಾಗಿ ಸಂಸಾರ ನಡೆಸುತ್ತಿ ರುವನು. ಅವನ ಸಂಸಾರದಲ್ಲಿ ಏನೊಂದೂ ತರದ ಕುಂದೂ ಕಂಡು ಬರುವುದಿಲ್ಲ.



# ೧೧. ಹಾಳೂರ ಗೋಳು



ಬೋಳೂರಿನ ದಾರಿಯಾಗಿ, ಕೂಳೂರಿನ ಮಾರ್ಗವಾಗಿ ಬರುವಾಗ ದೊರೆಯುವುದೇ ಹಾಳೂರೆಂದು ಎಲ್ಲರಿಗೂ ತಿಳಿದಿದೆ. ಆದರೆ ಅಲ್ಲಿನ ಗೋಳು ಮಾತ್ರ ಎಲ್ಲರಿಗೂ ತಿಳಿದಿರಲಾರದು.

ಊರ ಹೆಸರು ಮಾತ್ರ ಹಾಳೂರಾಗಿದ್ದರೂ ವಸ್ತು ಸ್ಥಿತಿಯು ಮಾತ್ರ ಹಾಗಿರಲಿಲ್ಲ. ನವನಾಗರಿಕತೆಯು ಹಾಳೂರಲ್ಲಿ ಅದೇ ಮೊಳೆದೋರಹತ್ತಿದೆ. ಹತ್ತಿಪ್ಪತ್ತು ಮನೆಗಳೂ, ಕೆಲವು ಗುಡಿಸಲುಗಳೂ, ಮನೆಗೊಂದೆಂಬಂತಿರುವ ಅಂಗಡಿಗಳೂ, ಕೆಲವು ಮಾಳಿಗೆ ಮನೆಗಳೂ, ಹಾಳೂರಲ್ಲಿರುವವು. ಎರಡು ಪಾಠ ಶಾಲೆಗಳಿವೆ. ಈ ಹಾಳೂರಲ್ಲಿ ಧನಿಕರೆಂದರೆ ಬೀಡಿನ ಮುತ್ತಯ್ಯನವರು ಮತ್ತು ಕೆಳಮನೆ ಸುಬ್ಬಾಭಟ್ಟರು. ಮುತ್ತಯ್ಯನವರೆಂದರೆ ಹಾಳೂರೇ ಅಲ್ಲದೆ ನೆರೆಯೂರುಗಳೂ ನಡುಗುತ್ತಿದ್ದವು. ಈತನು ವಿಷಯ ಲಂಪಟನೂ, ದುರ್ಗುಣ ಭರಿತನೂ ಆಗಿದ್ದನು. ಈತನನ್ನು ಯಾರೂ ಯಾವಾಗಲೂ ಎದುರಿಸಲೊಲ್ಲರು. ಸುಬ್ಬಾಭಟ್ಟರಾದರೋ ಯಾವ ಗೋಜಿಗೂ ಹೋಗದೆ, ಕಾಸಿಗೆ ಕಾಸು ಕೂಡಿಸುವ ಯೋಚನೆಯಲ್ಲೇ ಕಾಲ ಕಳೆಯುತ್ತಿದ್ದರು. ಮುತ್ತಯ್ಯನ ಮಗ ಸಣ್ಣಯ್ಯನೆಂದರೆ ಉಮೇಶನ ಗೆಳೆಯರಲ್ಲೊಬ್ಬ. ಉಮೇಶನೂ ಸಣ್ಣಯ್ಯನೂ ಮೊದಲು ಒಂದೇ ತರಗತಿಯಲ್ಲಿ ಓದುತ್ತಿದ್ದರು. ಆದರೆ ಉಮೇಶನು ಮೆಟ್ರಿಕ್ಯುಲೇಷನ್ ಪಾಸುಮಾಡಿದೊಡನೆ ಉಪಾಧ್ಯಾಯ ವೃತ್ತಿಯನ್ನವಲಂಬಿಸಿದನು. ಧನಿಕನ ಮಗನಾದ ಸಣ್ಣಯ್ಯನು ಮಾತ್ರ ಬಿ. ಎ. ಬಿ. ಎಲ್ ಪಾಸು

ಮಾಡುವುದಕ್ಕಾಗಿ ಮುಂದೆ ಓದುತ್ತಿದ್ದನು. ಇವರೇ ಇಲ್ಲಿಯ ವಿದ್ಯಾವಂತರು; ಇಬ್ಬರೂ ಸದ್ಗುಣಿಗಳು.

ಒಮ್ಮೆ ದಸರೆಯ ರಜೆಯಲ್ಲಿ ಉಮೇಶನು ಹಾಳೂರಿಗೆ ಬಂದಿದ್ದನು. ಮರುದಿನ ಸಂಜೆ ಸಮಯ ಉಮೇಶನು ವಾಯು ವಿಹಾರಕ್ಕಾಗಿ ಮೈದಾನದ ಕಡೆಗೆ ಹೋಗಿದ್ದನು. ಅಲ್ಲಿಂದ ಹಿಂತಿರುಗುವಾಗ ಅವನಿಗೆ ನಾಟಕದ ಒಂದು 'ನೋಟೀಸು' ಸಿಕ್ಕಿತು. ಆಗ ಅಲ್ಲಿ ಹೊಸದಾಗಿ ಒಂದು ನಾಟಕ ಕಂಪೆನಿಯವರು ನಾಟಕ ಗಳನ್ನಾಡಿ ತೋರಿಸುತ್ತಿದ್ದರು. ಉಮೇಶನಿಗೆ ಸಿಕ್ಕಿದ ಕರಪತ್ರವು ಆದೇ ಕಂಪೆನಿಯದು. ಉಮೇಶನಿಗೆ ನಾಟಕವೆಂದರೆ ಹುಚ್ಚು ಹೆಚ್ಚು. ಆ ದಿನದ ನಾಟಕವು 'ಸಂಪೂರ್ಣ ರಾಮಾಯಣ'ವೆಂದು ಅವನು ತಿಳಿದುಕೊಂಡನು. ನಾಟಕಕ್ಕೆ ಹೋಗಲೇ ಬೇಕೆಂದು ಉಮೇಶನು ನಿಶ್ಚಯಿಸಿಕೊಂಡು, ಮನೆಗೆ ಹೋದನು. ರಾತ್ರೆಯೂಟ ತೀರಿಸಿ ಕೊಂಡ ಉಮೇಶನು ಸುಮಾರು ಒಂಭತ್ತು ಘಂಟೆಗೆ ಸರಿಯಾಗಿ ನಾಟಕಮಂದಿರಕ್ಕೆ ಬಂದನು. ಅಲ್ಲಿ 'ಫಸ್ಟ್ ಕ್ಲಾಸಿ'ನ ಟಿಕೇಟನ್ನು ಇಸುಕೊಂಡು ಮಂದಿರದೊಳಗೆ ಹೋಗಿ ನಿಯಮಿತ ಸ್ಥಳದಲ್ಲಿ ಕುಳಿತನು.

ರಜೆಯಲ್ಲಿ ಬಂದಿದ್ದ ಸಣ್ಣಯ್ಯನೂ ತನ್ನ ತಂದೆಯೊಂದಿಗೆ ಅಲ್ಲಿ ಕುಳಿತಿದ್ದನು. ಉಮೇಶನಿಗೂ ಸಣ್ಣಯ್ಯನಿಗೂ ಕುಶಲ ಪ್ರಶ್ನೆಗಳಾ ದುವು. ಅಷ್ಟರಲ್ಲಿ 'ಸ್ಟೇಜಿ'ನೊಳಗಿಂದ ಮೂರನೆಯ ಬಾರಿ ಗಂಟೆ ಬಾರಿಸುವುದು ಕೇಳಿಬಂತು. ಮಂದಿರವು ನಿಶ್ಶಬ್ದತೆಯಿಂದ ಕೂಡಿತು. ಕೂಡಲೇ ಪರದೆಯು ಎತ್ತಲ್ಪಟ್ಟು, ಸೂತ್ರಧಾರಿಯ ಮಂಗಲಾ ಚರಣವೂ ಕೊನೆಗೊಂಡಿತು. ಕಥಾರಂಭವಾಯಿತು. ಮೈಸೂರು ತಿಮ್ಮಣ್ಣನು ರಾವಣನ ಪಾತ್ರವನ್ನೂ, ಬೆಂಗಳೂರಿನ ತಿರುಮಲೇಶನು ರಾಮನ ಪಾತ್ರವನ್ನೂ ವಹಿಸಿದ್ದರು. ಮಿಸ್ ರಮಾ ಎಂಬ ಸುಪ್ರಸಿದ್ಧ ನಟಿಯು ಅಂದಿನ ಸೀತೆಯಾಗಿದ್ದಳು. ನಾಟಕದ ಎರಡು

ಅಂಕಗಳು ಕಳೆದು ಸೀತಾಪಹರಣದ ಮೂರನೇ ಅಂಕವು ಆದೇ ಪ್ರಾರಂಭವಾಯಿತು.

ಸೀತೆಯ ಹಾವಭಾವಗಳನ್ನೂ, ಮುಖದ ಚೆಲುವನ್ನೂ ನೋಡಿ ಮುತ್ತಯ್ಯನ ಮನಸ್ಸು ಆ ಕಡೆ ಹರಿಯಿತು. ಆತನಿಗೆ ಸರ್ವವೂ ಸೀತೆಯಂತೆ ಕಾಣತೊಡಗಿತು. ಅವನ ಪಾಲಿಗೆ ಎಲ್ಲರೂ ಸೀತೆಯಾದರು. ಮುತ್ತಯ್ಯನು ಸಂತೋಷದಿಂದ ಉಬ್ಬಿ, ಆಕೆಯನ್ನು ಆಲಂಗಿಸುವೆನೆಂದು, ಹತ್ತಿರ ಕುಳಿತಿದ್ದ ಸಣ್ಣಯ್ಯನನ್ನು ಆಲಂಗಿಸ ಹೋದನು. ಆದರೆ ಮತ್ತೆ ಸೀತೆಯಲ್ಲವೆಂದರಿತು ಸುಮ್ಮನಾದನು.

ಆಗ ಸ್ಟೇಜಿನ ಮೇಲಿದ್ದ ಸೀತೆಯು, ಒಂದು ಕಂದವನ್ನು ಹಾಡಿ ಮುಗಿಸಿದಳು. ಆಕೆಯ ಪದ್ಯಕ್ಕೆ ಮೆಚ್ಚಿ ಮುತ್ತಯ್ಯನು ಎರಡು ರೂಪಾಯಿಗಳನ್ನು ಸ್ಟೇಜಿನ ಮೇಲೆ ಎಸೆದು, "ಒನ್ಸ್‌ಮೋರ್" ಎಂದನು. ಸೀತೆಯ ಪಾತ್ರವಹಿಸಿದ ರಘುಯು ಮುತ್ತಯ್ಯನನ್ನು ಕಂಡು, ನಸುನಕ್ಕು, ತನ್ನ ಕೃತಜ್ಞತೆಯನ್ನು ಪ್ರಕಟಗೊಳಿಸಿ ಪುನಃ ಹಾಡಲು ತೊಡಗಿದಳು. ಮುತ್ತಯ್ಯನಿಗೆ ಸ್ವರ್ಗವು ಇನ್ನು ಒಂದೇ ಗೇಣುದೂರದಲ್ಲಿ ಉಳಿದಂತೆ ಕಂಡಿತು. ಆತನ ಈ ಚೇಷ್ಟೆಗಳನ್ನು ಕಂಡು ಉಮೇಶನಿಗೆ ಸಹಿಸಲಾರದಷ್ಟು ನಗುವೂ, ಹಿಂದಿನಿಂದ ಸಿಟ್ಟೂ ಬಂತು. ಆದರೆ ಅದಾರಿಗೆ ಉಸಿರೆತ್ತಲು ಧೈರ್ಯಬರುವುದು? ಹೇಗೂ ನಾಟಕವೂ ಕೊನೆಗೊಂಡಿತು. ಅಂಕಪರದೆಯು ಸ್ಟೇಜಿನ ಮೇಲೆ ಹಾರತೊಡಗಿತು. ಪ್ರೇಕ್ಷಕರೆಲ್ಲರೂ ತಂತಮ್ಮ ಮನೆಗಳಿಗೆ ನಡೆದರು.

ಮರುದಿನ "ಆಹಾ! ಇದೇನು ಕನಸೋ, ನಿಜವೋ? ನಿನ್ನೆ ದಿನ ಇಂದ್ರಭವನದಂತಿದ್ದ ಆ ಮಂದಿರವು ಈಗೆಲ್ಲಿ? 'ಸಂಪೂರ್ಣ ರಾಮಾಯಣ'ದಿಂದ ಹಾಳೂರ ಜನರನ್ನು ಸಂತೋಷಪಡಿಸಿದ ಆ ನಾಟಕ ಮಂದಿರವೆಲ್ಲಿ? ಮಾರುತಿಯು ಲಂಕಾನಗರವನ್ನು ಸುಟ್ಟಂತೆ, ಈ ಮಂದಿರವನ್ನೇ ಸುಟ್ಟಿರುವರಲ್ಲಾ? ಇನ್ನು ಬಡವರಿಗೆ ಉಳಿಗಾಲ

ವೆಲ್ಲಿ?" ಎಂದು ಕೆಲವರು ತಮ್ಮೊಳಗೆ ಹೇಳಿಕೊಳ್ಳುತ್ತಾ ಹೋಗು ತ್ತಿದ್ದುದು ಮಹಡಿಯ ಮೇಲಿದ್ದ ಉಮೇಶನಿಗೆ ಕೇಳಿಸಿತು. ವಿಷಯ ವನ್ನು ಸರಿಯಾಗಿ ತಿಳಿದುಕೊಳ್ಳಬೇಕೆಂದು ಅವನು ನೇರಾಗಿ ಮೈದಾನದ ಕಡೆಗೆ ಭರದಿಂದ ಸಾಗಿದನು.

ನೋಡುವುದೇನು?— ಹಿಂದಿನ ದಿನ ವಿದ್ಯುದ್ದೀಪಗಳಿಂದ ಝಗ ಝಗಿಸುತಿದ್ದ ನಾಟಕ ಮಂದಿರವು ಇಂದು ಬೂದಿಯಾಗಿತ್ತು. ಅಲ್ಲಿ ಹೋಗಿ ವಿಚಾರಿಸಲಾಗಿ ಎಲ್ಲರೂ 'ತಾವರಿಯೆವು' ಎಂಬ ಸೊಲ್ಲನ್ನೇ ಹಾಡತೊಡಗಿದರು. ಈ ರೀತಿ ಮಾಡಿದವನು ಮುತ್ತಯ್ಯನಲ್ಲದೆ ಬೇರೆ ಯಾರೂ ಆಗಿರಲಾರರೆಂದು ಉಮೇಶನು ತರ್ಕಿಸಿದನು. ಆ ಮೇಲೆ ಅವನು ಅಲ್ಲಿಂದ ಹೊರಟು ಸಣ್ಣಯ್ಯನನ್ನು ಕಾಣಲು ಹೋದನು. ಮತ್ತು ಆತನೊಡನೆ ಭೀಷಣ ಹಾಗೂ ದುಃಖಕರವಾದ ನಾಟಕ ಮಂದಿರದ ಸ್ಥಿತಿಯನ್ನು ಹೇಳಿದನು. ಸಣ್ಣಯ್ಯನು ಹಿಂದು ಮುಂದು ನೋಡುತ್ತಾ, ಕಡೆಗೆ ದುಃಖದಿಂದ ಹೇಳತೊಡಗಿದನು.

"ಮಿತ್ರಾ, ನಿನ್ನೆ ನನ್ನ ತಂದೆಯು ನಾಟಕಮಂದಿರದಲ್ಲಿ ಮಾಡಿದ ಚೇಷ್ಟೆಗಳನ್ನು ನೀನೇ ಕಂಡಿರುವೆಯಷ್ಟೆ? ನಾಟಕವು ಮುಗಿದೊಡನೆ ನನ್ನನ್ನು ಮನೆಗೆ ಕಳುಹಿಸಿ, ತಂದೆಯು ರಮೆಯನ್ನು ವಶಪಡಿಸಿ ಕೊಳ್ಳುವುದಕ್ಕಾಗಿ ನಾಟಕ ಮಂದಿರವನ್ನು ನುಗ್ಗಿ ಆಕೆಯೊಡನೆ ಮಾತಾಡಿದನಂತೆ. ಆಕೆಯು ಸಿಟ್ಟಿಗೇಳಲು ಅಪ್ಪನು ಅವಳನ್ನು ಹಿಡಿ ದೆಳೆದನಂತೆ. ಆಗ ನಾಟಕ ಕಂಪೆನಿಯವರೆಲ್ಲರೂ ಓಡಿಬಂದು ಇವನನ್ನು ಚೆನ್ನಾಗಿ ಬಡೆದರಂತೆ. ಅಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಓಡಿ ಹೋಗಿ, ಅಪ್ಪನು ತನ್ನ ಹತ್ತೈವತ್ತು ಆಳುಗಳನ್ನು ಕೂಡಿಕೊಂಡು ಮತ್ತೆ ನಾಟಕ ಮಂದಿರಕ್ಕೆ ಬಂದನಂತೆ. ಬೀಡಿನ ಮುತ್ತಯ್ಯನೆಂದರೆ ಸಾಮಾನ್ಯನಲ್ಲವೆಂದು, ಆ ಮೇಲೆ ತಿಳಿದ ಕಂಪೆನಿಯವರು ಹೆದರಿ, ಆಗಲೇ ಕಾಲಿಗೆ ಬುದ್ಧಿಹೇಳಿದ್ದರು. ಹಾಗಾಗಿ ಅಪ್ಪನು ಅಲ್ಲಿಗೆ

ಹೋಗಿ ನೋಡುವಾಗ ಅಲ್ಲಿ ಯಾರೂ ಇರಲಿಲ್ಲ. ಸಿಟ್ಟಿನಿಂದ ಹುಚ್ಚನಂತಾದ ತಂದೆಯು ನಿಷ್ಕರುಣೆಯಾಗಿ ಆ ನಾಟಕ ಮಂದಿರವನ್ನೇ ಸುಟ್ಟುಬಿಟ್ಟನು. ನನ್ನ ಮನಸ್ಸಿನಲ್ಲಿ ಆಗುವ ವ್ಯಸನವನ್ನು ಯಾರೊಡನೆ ಹೇಳಲಿ? ನಾನು ಬುದ್ಧಿ ಹೇಳಿದರೆ ಆತನು ಸರ್ವಥಾ ಕೇಳಲಾರನು. ಅದರಿಂದಾಗಿ ಆದುದನ್ನೆಲ್ಲಾ ನೋಡಿ ಸುಮ್ಮನಿರಬೇಕಾಗಿದೆ. ಮಿತ್ರಾ, ನೀನು ಈ ವರ್ತಮಾನವನ್ನು ಯಾರಿಗೂ ಹೇಳಬೇಡ. ಗುಟ್ಟು ರಟ್ಟಾದರೆ ತಂದೆಯು ನನ್ನನ್ನು ಜೀವದಿಂದ ಇರಲು ಬಿಡಲಾರನು" ಎಂದು ಕಣ್ಣೀರು ಸುರಿಸಿದನು.

ಈ ಸಂಗತಿಗಳನ್ನೆಲ್ಲಾ ಕೇಳಿ ಮೂಕನಂತಾದ ಉಮೇಶನು ಏನನ್ನೂ ಹೇಳದೆ ತನ್ನ ಮನೆಗೆ ನಡೆದನು. ಸಣ್ಣಯ್ಯನು ಹೇಳಿದ ಕಡೆಯ ಮಾತಿಗಾಗಿ ಉಮೇಶನು ಯಾವ ಪ್ರತೀಕಾರವನ್ನು ಮಾಡುವ ಗೋಜಿಗೆ ಹೋಗಲಿಲ್ಲ. ಇನ್ನು ತಾನಿಲ್ಲಿದ್ದರೆ ಬಹಳ ತೊಂದರೆಯಾಗುವುದೆಂದು ಯೋಚಿಸಿ ಉಮೇಶನು ಅಂದೇ ಬೆಂಗಳೂರಿಗೆ ಹೊರಟು ಹೋದನು.

ಆದರೆ ನಾಟಕ ಕಂಪೆನಿಯವರು ನ್ಯಾಯಾಲಯದಲ್ಲಿ ಮೊರೆಯಿಟ್ಟರು. ಮುತ್ತಯ್ಯನ ಕಾರಭಾರದಿಂದಾಗಿ ಒಂದಾದರೂ ಸಾಕ್ಷಿ ಸಿಗದೆ ಕೇಸು ತಳ್ಳಲ್ಪಟ್ಟಿತು. ಮುತ್ತಯ್ಯನೇ ಗೆದ್ದು ಬಿಟ್ಟನು.

ಇಂತಹ ಇನ್ನೆಷ್ಟೋ ಉದಾಹರಣೆಗಳಿವೆ. ಆದರೆ ಈ ಗೋಳನ್ನು ಕೇಳುವವರಾರು?—



# ೧೨. ಭಟ್ಟರ ಅಧ್ಯಕ್ಷತನ



ರಾತ್ರೆ ಮಲಗಿದ ಮೇಲೆ, ಕಿವಿಯ ಹತ್ತಿರ ಬಂದು ಇಂಪಾಗಿ ಸಂಗೀತ ಹಾಡುವ–ಕಿವಿಗೊಡದಿದ್ದರೆ ಕಚ್ಚಿ ಕೇಳುವಂತೆ ಮಾಡುವ— ಆ ಸಂಗೀತ ಗಾರರನ್ನಾದರೂ ಎಣಿಸಬಹುದು; ರಾಮಪುರ ದಲ್ಲಿ ಸನಾತನಿಗಳೆಷ್ಟಿರುವರೆಂದು ಲೆಖ್ಖಹಾಕಲು ಸಾಧ್ಯವಿಲ್ಲ. ಇವ ರಲ್ಲಿ ಸನಾತನ ಧರ್ಮವನ್ನು ಅರೆದು, ಕುಡಿದು, ಜೀರ್ಣಿಸಿಕೊಂಡು, ತೇಗಿದವರೂ ಇರುವರು. ಅವರ ಮಡಿ ಮೈಲಿಗೆಗಳೇನು, ಶಾಸ್ತ್ರಾ ಧಾರದ ಉದ್ದುದ್ದ ಮಾತುಗಳೇನು, ಗ್ರಾಮೋಫೋನಿನಿಂದ 'ಕೀ' ಮುಗಿಯುವ ವರೆಗೆ ಎಡೆ ಬಿಡದೆ ಬರುವ ಸ್ವರದಂತೆ ಹೊರಡುವ ತಡೆಯಿಲ್ಲದ ಮಂತ್ರವೇನು, ದಿನನಿತ್ಯದ ಸ್ನಾನವೇನು, ಹೀಗೆಲ್ಲಾ ಇದ್ದರೂ ಡಾಂಭಿಕವೃತ್ತಿಯವರೇ ಹೆಚ್ಚೆಂದು ತರುಣರ ಮತ. ಈ ಮಾತನ್ನು ಸನಾತನಿಗಳೆಂದೂ ಒಪ್ಪುತ್ತಿರಲಿಲ್ಲ.

ಉಂಡಂ ಭಟ್ಟರೇ ಸನಾತನಿಗಳಲ್ಲಿ ಅಗ್ರಗಣ್ಯರು. ಬೇರೆ ಯಾವ 'ಕೇಸಿ'ಗಾದರೂ ಅಪೀಲಿದೆ;—ಮುನ್ಸಿಫರಲ್ಲಿಂದ ಸಬ್‌ಕೋರ್ಟಿಗೆ, ಅಲ್ಲಿಂದ ಡಿಸ್ಟ್ರಿಕ್ಟು ಕೋರ್ಟಿಗೆ, ಮತ್ತೆ ಹೈ ಕೋರ್ಟಿಗೆ, ಅಲ್ಲೂ ಆಗ ದಿದ್ದರೆ ಪ್ರಿವಿ ಕೌನ್ಸಿಲಿಗೆ! ಆದರೆ ಶಾಸ್ತ್ರ ಸಂಬಂಧದ ಯಾವ 'ಕೇಸಿ'ನಲ್ಲೂ ನಮ್ಮ ಉಂಡಂ ಭಟ್ಟರದೇ ಕಡೇ ತೀರ್ಪು! ಮುಂದಕ್ಕೆ ಅಪೀಲೇ ಇಲ್ಲ. ಇಳಿವಯಸ್ಸಿನವರಿಗೆಲ್ಲಾ ಭಟ್ಟರಲ್ಲಿ ತುಂಬಾ ವಿಶ್ವಾಸ. ತರುಣರು ಮಾತ್ರ ತೀರಾ ವಿರುದ್ಧ; ಗೊಡ್ಡು ಸನಾತನಿಗಳೆಂದು ಪರಿಹಾಸ್ಯ ಮಾಡುತಿದ್ದರು. ನಿಜವಾಗಿ ಉಂಡಂಭಟ್ಟರು ಡಾಂಭಿಕರು.

ಕಾಂಗ್ರೆಸ್ಸಿನವರು ಎಲ್ಲಾ ಕಡೆಗಳಲ್ಲೂ, ಹರಿಜನೋದ್ಧಾರದ ಕುರಿತು ಪ್ರಯತ್ನ ಮಾಡಿದಂತೆ, ರಾಮಪುರದಲ್ಲೂ ಬೇಕಷ್ಟು ಯತ್ನ ನಡೆಸಿದ್ದರು. ಅಲ್ಲಲ್ಲಿ ಸಭೆ, ಕೂಟ, ಭಾಷಣಗಳು ನಡೆದಿದ್ದುವು. ದೇವಸ್ಥಾನ ಪ್ರವೇಶಕ್ಕಾಗಿಯೂ ಯತ್ನಗಳಾಗುತ್ತಿದ್ದವು. ಬ್ರಾಹ್ಮಣರಲ್ಲಿ ಕೂಡಾ ಹಲವರು ಅಸ್ಪೃಶ್ಯರೊಡಗೂಡಿದುದನ್ನು ಕಂಡು, ಭಟ್ಟರು ಬಹಳೇ ಕೋಪಗೊಂಡರು. ತಾನು ಜಗದೀಶ್ವರನಾಗಿರುತ್ತಿದ್ದರೆ ಆಗಲೇ ಮೂರನೆಯ ಕಣ್ಣನ್ನು ತೆರೆದು, ರಾಮಪುರವನ್ನೇ ಸುಟ್ಟುಬಿಡುವಂತಿದ್ದರು. ಭಟ್ಟರ ಅದೃಷ್ಟ ಚೆನ್ನಾಗಿಲ್ಲದೆ, ಇನ್ನೊಂದು ಕಣ್ಣು ಮೂಡದಿದ್ದುದರಿಂದ, ಇದ್ದ ಎರಡು ಕಣ್ಣುಗಳನ್ನೇ ಇನ್ನಷ್ಟು ದೊಡ್ಡದು ಮಾಡಿಕೊಂಡು ನೋಡುತಿದ್ದರು. ಪಾಪ! ನೋಡದೇನು ಮಾಡಿಯಾರು? ಸಾವಿರಾರು ಜನರೆದುರು ಒಬ್ಬಂಟಿಗರಾದ ಭಟ್ಟರು ಏನು ಮಾಡಲು ಸಾಧ್ಯ?

ಭಟ್ಟರ ಶಿಷ್ಯವರ್ಗದವರಲ್ಲಿ ಶೇಕಡಾ ೮೦ ಜನರು ಹರಿಜನೋದ್ಧಾರಕ್ಕೆ ತೊಡಗಿದ ಮೇಲೆ, ಭಟ್ಟರು ಸುಮ್ಮನಿದ್ದುದರಲ್ಲೇನು ತಪ್ಪು? ಆದರೂ ತನ್ನಲ್ಲೇ, "ಕಾಲದ ಮಹಿಮೆ. ಇದೆಲ್ಲ ಹೋಗುವ ಕಾಲದ ಬುದ್ಧಿ. ಅಲ್ಲದಿದ್ದರೆ ಹೊಲೆಯರನ್ನು ದೇವಸ್ಥಾನದ ಒಳಹೊಗಿಸುವುದೆಂದರೇನು? ಬ್ರಾಹ್ಮಣರೆಲ್ಲ ವೈದಿಕ ಧರ್ಮಕ್ಕೆ ತಿಲಾಂಜಲಿ ಕೊಡುವುದೆಂದರೇನು? ನಮ್ಮ ಹಿರಿಯರೆಲ್ಲಾ ಹೀಗೆ ಮಾಡಿದ್ದರೇ? ಆ ಗಾಂಧಿ ಫಕೀರನಿಂದಾಗಿ ಈ ಗ್ರಹಚಾರವು ಒದಗಿತು. ಈ ಎಳೆ ನೆತ್ತರ ಹುಡುಗರು ಆತನು ಹೇಳಿದಂತೆ ಕುಣಿಯುತಿದ್ದಾರೆ. ಹೊಲೆಯರ ಹುಡುಗಿಯರನ್ನೂ ನಾಳೆ ಮದುವೆಯಾಗುವರೋ ಏನೋ? ಹರೀ, ಕೃಷ್ಣಾ, ನಮ್ಮ ಕಣ್ಣಿಂದ ಇದನ್ನು ನೋಡುವ ಹಾಗಾಯಿತಲ್ಲಾ!! ಸನಾತನ ಧರ್ಮವೇ ಅಳಿಯುವಂತಾಯಿತಲ್ಲಾ!!! ನಮ್ಮ ಹಿರಿಯರ ಕಾಲದಲ್ಲಿ, ಅಸ್ಪೃಶ್ಯರೆಂದರೆ ಮೈಲು ದೂರ ನಿಲ್ಲಬೇಕಿತ್ತು. ಕೃಷ್ಣಾ,

ನಿನಗಾದರೂ ಕರುಣೆ ಬಾರದೇ! ನಮ್ಮಂತಹರ ವಿನಾಶದ ಕೆಲಸಕ್ಕೆ ನೀನೂ ಸಹಿ ಇತ್ತಿರುವೆಯಾ!" ಎಂದು ದಿನವೂ ಗೊಣಗುಟ್ಟುತ್ತಿದ್ದ!

ಒಂದು ದಿನ ಮಧ್ಯಾಹ್ನ, ಭೋಜನಾನಂತರ ಭಟ್ಟರು ವೀಳ್ಯದೆಲೆ ಜಗಿಯುತ್ತಾ ಚಾವಡಿಯಲ್ಲಿ ಒರಗಿ ಕುಳಿತಿದ್ದರು. ಅಷ್ಟರಲ್ಲಿ ಬಿಳಿ ಟೊಪ್ಪಿ ಧರಿಸಿದ ತರುಣರಿಬ್ಬರು ನಮಸ್ಕರಿಸುತ್ತಾ ಚಾವಡಿಗೆ ಬಂದರು. ಬಿಳಿಟೊಪ್ಪಿಯನ್ನು ಕಂಡೊಡನೆ ಭಟ್ಟರು ನಖಶಿಖಾಂತವಾಗಿ ಉರಿಯ ತೊಡಗಿದರು. ಆದರೂ ತರುಣರಲ್ಲೊಬ್ಬನಾದ ರಾಮರಾಯನು (ವಾಲಂಟಿಯರ್) ಧೈರ್ಯದಿಂದ, "ಸ್ವಾಮಿ, ಪೂಜ್ಯರೇ, ನಾಳೆ ಸಂಜೆಗೆ ಊರ ಮುಂದಿನ ಮೈದಾನಿನಲ್ಲಿ, ಹರಿಜನರ ಪ್ರಚಂಡ ಸಭೆ ಸೇರಲಿದೆ. ಹರಿಜನರೆಂದರೆ ಪರಮಾತ್ಮನ ಪ್ರೀತಿಯ ಜನರು. ಆದುದರಿಂದ ನಾಳೆಯ ಸಭೆಯಲ್ಲಿ ವೈದಿಕಾಗ್ರೇಸರರಾದ ತಾವು, ಅಗ್ರಪೀಠವೇರಿ, ಹರಿಜನರನ್ನು ಕಾಪಾಡಬೇಕು. ಅವರನ್ನು ಕೇಳುವವರಿಲ್ಲ. ತಮ್ಮಂತಹರ ಸಹಾಯ ವಿಲ್ಲದೆ ಹೋದರೆ ಹರಿಜನರು ಉಳಿವಂತಿಲ್ಲ" ಎಂದನು.

ಭಟ್ಟರು ಸ್ವಾಭಿಮಾನಿಗಳಲ್ಲಿ ಹೆಸರಾದವರು. ಅವರಿಗೆ ರಾಮ ರಾಯನ ಮಾತುಗಳು ಅಮೃತ ಸಮಾನವಾದವು. ಹರಿಜನರೆಂದರೆ ಸನಾತನಿಗಳೆಂದೇ ಬಗೆದ ಆ ಭಟ್ಟರು, "ಏನು! ನಾಳೆ ಜರಗುವ ಪ್ರಚಂಡ ಸಭೆಗೆ ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿರುವರೇ? ಹೇಗೂ ಆಗಲಿ. ಅಸ್ಪೃಶ್ಯರನ್ನು ಕಡೆತನಕ ಅಸ್ಪೃಶ್ಯರನ್ನಾಗಿಯೇ ಇರಗೊಳಿ ಸಬೇಕೆಂದು ಭಾಷಣಕೊಡುವೆನು. ಎಲ್ಲರಲ್ಲಿಯೂ ನವಸ್ಫೂರ್ತಿ ಯನ್ನು ಹುಟ್ಟಿಸುವೆನು ಸನಾತನಿಗಳ ಧನ ಮಾನಗಳನ್ನು ರಕ್ಷಿಸಿ ಪುಣ್ಯಕಟ್ಟಿಕೊಳ್ಳುವೆನು. ಇಂಥಾ ಸುಸಂಧಿಯನ್ನು ಬಿಟ್ಟರೆ ಹಿಂದ ಣಿಂದ ಕೊರಗ ಬೇಕಾಗುವುದು" ಎಂದು ಮನಸ್ಸಿನಲ್ಲೇ ಹೇಳಿಕೊಂಡು, ಫೂಟ್ ಬೋಲಿನಂತೆ ಉಬ್ಬಿಬಿಟ್ಟರು. ತರುಣರನ್ನು ಚೆನ್ನಾಗಿ ಉಪಚ ರಿಸಿ, ಅಧ್ಯಕ್ಷನಾಗಲು ಒಪ್ಪಿ ಅವರನ್ನು ಕಳುಹಿಸಿಬಿಟ್ಟರು.

ಭಟ್ಟರಿಗೆ ನಿಮಿಷವು ಯುಗವಾಯಿತು. ರಾತ್ರಿಯೆಲ್ಲಾ ಇದೇ ಯೋಚನೆ. ಮರುದಿನದ ತನ್ನ ವೇಷ-ಭೂಷಣದ ರೀತಿ, ಅಗ್ರಸ್ಥಾನಾ ರೋಹಣ, ಪ್ರಚಂಡ ಸಭೆಯ ಮುಂದೆ ಭಾಷಣ, ಇವೇ ಮೊದಲಾದ ವಿಷಯಗಳನ್ನು ಯೋಚಿಸಿ ಯೋಚಿಸಿ ಆನಂದಿಸುತ್ತಿದ್ದರು. ಸಭೆ ಜರಗುವ ದಿನ ಬೆಳಗ್ಗೆ, ಭಟ್ಟರು ತನ್ನ ಪ್ರಾತರ್ವಿಧಿಗಳನ್ನು ತೀರಿಸಿಕೊಂಡರು. ಆಗ ಫಕ್ಕನೆ ಮಿದುಳಿನಲ್ಲಿ 'ಎಲೆಕ್ಟ್ರಿಕ್ ಕರೆಂಟು' ಪಾಸಾದಂತಾಗಿ, ಕೂಡಲೇ ಏನೋ ಒಂದು ವಿಷಯ ಹೊಳೆಯಿತು. ಭಟ್ಟರು ಒಡನೆ ರಾಮರಾಯನಲ್ಲಿಗೆ ಹೋಗಿ, ಸಭೆ ಜರಗುವ ಸಮಯವನ್ನು ತಿಳಿದುಕೊಂಡರು. ರಾಮರಾಯನು ಅವರನ್ನು ಇನ್ನಷ್ಟು ಉಬ್ಬಿಸಿ ಕಳುಹಿಸಿಬಿಟ್ಟನು. ಅಲ್ಲಿಂದ ಮನೆಗೆ ಬಂದ ಭಟ್ಟರು ನೆರೆಯವನ ಗಡಿಯಾರವು ಸರಿಯಾದ ಸಮಯವು ಕೊಡುವು ದಿಲ್ಲವೆಂದು ಅದನ್ನು ಶಪಿಸತೊಡಗಿದರು. ಈ ರೀತಿ ಚಡಪಡಿಸುತ್ತಿದ್ದ ಭಟ್ಟರಿಗೆ, ಮೂರು ಘಂಟೆಯಾದಾಗ 'ಮೈಸೂರುಪಾಕ್' ತಿಂದರಾಗು ವಷ್ಟು ಆನಂದವಾಯಿತು.

ಇದೀಗ ಭಟ್ಟರು, ಧೋತರವೊಂದನ್ನು ಷಡ್ಪುಚ್ಛಹಾಕಿ ಉಟ್ಟು ಕೊಂಡು, ಉತ್ತರೀಯವನ್ನು ಹೆಗಲ ಮೇಲೆ ಹಾಕಿಕೊಂಡು, 'ಅಫೂಟ್' ಮದುವಣಿಗನಂತಾಗಿ ಮೈದಾನಿನ ದಾರಿ ಹಿಡಿದರು. ರಾಮರಾಯನು ಮೈದಾನಿನಲ್ಲಿನ ಪ್ರಚಂಡ ಸಭೆಯನ್ನು ವ್ಯವಸ್ಥಿತ ರೀತಿಯಲ್ಲಿ ಕುಳ್ಳಿರಿ ಸುತ್ತಿದ್ದನು. ಚಂದ್ರನ ಬರವನ್ನು ಕಂಡು ಸಮುದ್ರವು ಉಕ್ಕೇರಿ ಭೋರ್ಗರೆವಂತೆ, ಭಟ್ಟರನ್ನು ಕಂಡು ಸರ್ವರೂ ನಗಹತ್ತಿ, ಅದಾವ ಕಾರಣದಿಂದಲೋ ಫಕ್ಕನೆ ಸುಮ್ಮನಾಗಿ ಬಿಟ್ಟರು.

ಕೂಡಲೇ ಶುಚಿಯಾದ ಉಡುಪುಗಳನ್ನು ಧರಿಸಿದ ಹರಿಜನ ಗೃಹ ಸ್ಥನೊಬ್ಬನು ಇತ್ತಬಂದು ಭಟ್ಟರ ಕೈಹಿಡಿದು, "ಮಹನೀಯರೇ, ನಮ್ಮಂತಹ ಬಡವರುದ್ಧಾರಕ್ಕಾಗಿ ತಾವು ಮುಂದೆ ಬಂದುದಕ್ಕೆ ಬಹಳ

ಕೃತಜ್ಞತೆಗಳು; ಹೀಗೆ ದಯಮಾಡಿಸಬೇಕು ದೇವ್ರೂ!" ಎಂದನು. ಭಟ್ಟರು ಮೊದಲೇ ಸ್ವಲ್ಪ ಸ್ಥೂಲಜೀವಿಗಳು. ಗೃಹಸ್ಥನ ಮಾತಿನಿಂದ ಇನ್ನಷ್ಟು ಉಬ್ಬಿಬಿಟ್ಟರು. ಆದರೆ ಆತನು ಅಸ್ಪೃಶ್ಯನೆಂದರಿತಿದ್ದರೆ, ತನ್ನ ನೇತ್ರಾಗ್ನಿಯಿಂದಲೇ ಆತನನ್ನು ಸುಟ್ಟುಬಿಡುತ್ತಿದ್ದರೋ ಏನೋ! ಹಾಗೂ ಆಧ್ಯತೆಯಿಂದ ಪೀಠವನ್ನೇರಿ ಕುಳಿತರು. ಕಾರ್ಯಾರಂಭ ವಾಯಿತು.

ಸೂಚಿಕೆಯಲ್ಲಿದ್ದಂತೆ ಒಂದೆರಡು 'ಪ್ರೋಗ್ರಾಂ'ಗಳು ಸುಸೂತ್ರ ವಾಗಿ ನಡೆದು, ಕೃಷ್ಣ ಎಂಬವನ 'ಹರಿಜನರೂ, ಗಾಂಧಿಯೂ' ಎಂಬ ವಿಷಯದ ಭಾಷಣಕ್ಕಾರಂಭವಾಯಿತು. ಕೃಷ್ಣನು ಅಧ್ಯಕ್ಷರ ಬಳಿಗೆ ಬಂದು, ಪುಷ್ಪಮಾಲಿಕೆಯೊಂದನ್ನು ಭಟ್ಟರ ಕೊರಳಿಗೆ ಹಾಕಿ "ಬಂಧು ಭಗಿನಿಯರೇ, ಹಿಂದೂ ಸಮಾಜದವರಿಂದ ಅಸ್ಪೃಶ್ಯರೆನಿಸಿಕೊಂಡ ನಮ್ಮ ಗಳ ಈ ಸಭೆಗೆ ಕೇವಲ ಸನಾತನಿಗಳೆಂದೆನಿಸಿಕೊಂಡಿರುವ, ಶ್ರೀಯುತ ಉಂಡಂಭಟ್ಟರು ಅಧ್ಯಕ್ಷರಾಗಿ ಬಂದುದನ್ನು ಕಂಡರೆ, ನಿಮಗೆಲ್ಲಾ ಆಶ್ಚರ್ಯವಾಗಬಹುದು. ಆದರೆ ಇಂತಹರೇ ನಮ್ಮನ್ನು ಸಹಕರಿಸ ದಿದ್ದರೆ, ಮತ್ತಾರು ನಮ್ಮನ್ನು ಕೇಳುವರು? ಆದುದರಿಂದ ಶ್ರೀ। ಭಟ್ಟ ರಿಗೆ ಸಭೆಯಪರವಾಗಿ ನನ್ನ ಅಭಿವಂದನೆಗಳು" ಎಂದು ಭಾಷಣಕ್ಕಾ ರಂಭಿಸಿದನು. ಸಭೆಯಲ್ಲಿ ಕರತಾಡನಕ್ಕೆ ಮೊದಲಾಯಿತು.

ಭಟ್ಟರಿಗೆ ಬೇರೆ ಸಿಡಿಲು ಬಡಿಯಬೇಕಾಗಿದ್ದಿಲ್ಲ. "ಏನು! ನಾನು ಅಸ್ಪೃಶ್ಯರ ಸಭಾಧ್ಯಕ್ಷನೇ! 'ಹರಿಜನರ ಸಭೆ'ಯೆಂದು ರಾಮರಾಯನು ಈ ರೀತಿ ಮೋಸಮಾಡಿದನೇ!" ಎಂದು ಯೋಚಿಸಿ ರಾಮರಾಯನನ್ನು ಹತ್ತಿರಕ್ಕೆ ಕರೆದು, "ನೀನು ಹರಿಜನರ ಸಭೆ ಎಂದಿರುವೆಯಲ್ಲವೇ! ಈಗ ಇದು ಯಾರ ಸಭೆ?" ಎಂದು ಸಿಟ್ಟಿನಿಂದ ಕೇಳಿದರು. ಅವರ ಎದೆ ಗುಂಡಿಗೆಯು ಬಹಳ ರಭಸದಿಂದ ಕೆಲಸಮಾಡುತ್ತಿತ್ತು.

"ಹರಿಜನರ ಸಭೆ!" ರಾಮರಾಯನ ಉತ್ತರ.

"ಹರಿಜನರೆಂದರಾರು?" ತಡವರಿಸುವ ಭಟ್ಟರ ಪ್ರಶ್ನೆ.

"ಮೊದಲು ಅಸ್ಪೃಶ್ಯರೆನಿಸಿಕೊಂಡಿದ್ದ ಹೊಲೆಯರೇ ಈಗ ಹರಿಜನರು" ರಾಮರಾಯನ ನಸುನಗೆಯ ಉತ್ತರ. ಈ ಮಾತು ಕೇಳಿ, ಭಟ್ಟರಿಗೆ ಈ ಲೋಕವೇ ತಿರುಗುತ್ತಿದೆಯಾಗಿ ಕಂಡಿತು. ಹೊಟ್ಟೆಯಲ್ಲೂ, ತಲೆಯಲ್ಲೂ, ಭೂಕಂಪವಾದಂತಾಯಿತು. "ಹ–ರಿ–ಜ–ನ" ಎನ್ನುತ್ತಾ ಭಟ್ಟರು ಬಿದ್ದುಬಿಟ್ಟರು. ಅಸ್ಪೃಶ್ಯರನ್ನು ಸ್ಪರ್ಶಮಾಡಿದ್ದರಿಂದ, ತನ್ನ ಕುಲ–ಗೋತ್ರ–ಮಾನಗಳೆಲ್ಲಾ ನಶಿಸಿದವೆಂದು ಬೆಂದು ಬೆಂಡಾದರು. 'ಬೆಂಕಿಯಲ್ಲಿ ಹಾರಿ ಪಾಪವನ್ನು ಕ್ಷಯಿಸಲೋ? ನೀರಿಗೆ ಹಾರಿಬಿಡಲೋ?' ಎನಿಸಿತು. ಆಗ ಸಭೆಯಲ್ಲಿ "ಭಟ್ಟರು ಹರಿಜನರು" ಎಂಬ ಗುಲ್ಲೆದ್ದಿತು. ಭಟ್ಟರ ಕಿವಿಯಲ್ಲಿ "ಹರಿಜನರ ಸಭಾಧ್ಯಕ್ಷ" ಎಂದು ಯಾರೋ ಹೇಳಿದಂತಾಯಿತು.

ಕೆಲವು ನಿಮಿಷಗಳ ಮೇಲೆ, ಭಟ್ಟರು ಚೇತರಿಸಿಕೊಂಡು ಧೈರ್ಯದಿಂದ "ಬಾಂಧವರೇ, ನೀವುಗಳೂ ಹರಿಯಿಂದ ನಿರ್ಮಿಸಲ್ಪಟ್ಟು ಹರಿಜನರೆನಿಸಿಕೊಂಡವರು. ನಾವೂ ಹರಿಯಿಂದಲೇ ಸೃಜಿಸಲ್ಪಟ್ಟ ಹರಿಯ ಜನರು. ನೀವೂ ಮಾನವರು. ನಾವೂ ಮಾನವರು. ನಮಗೂ ನಿಮಗೂ ಭೇದವೇನು? ನಡೆಯಲಿ ಮುಂದಿನ ಕಾರ್ಯಕ್ರಮ" ಎಂದೇಬಿಟ್ಟರು.

ಸಭೆಯಲ್ಲಿನ ಕರತಾಡನದ ಶಬ್ದವು ದಿಗಂತವನ್ನು ಸೇರಿತು. ಭಟ್ಟರು ತನ್ನ ಅಧ್ಯಕ್ಷತನವನ್ನು ಹೇಗೂ ಪೂರೈಸಿದರು.



# ೧೩. ಉದಾರಿ ರಂಗಪ್ಪನವರು



ಕೈ ನೀಡಿ 'ದೇಹಿ' ಎಂದವರಿಗೆ 'ಇಲ್ಲ' ಎನ್ನುವುದು ಧನಿಕರೆಂಬುದನ್ನು ತೋರಿಸುವ 'ಟ್ರೇಡ್ ಮಾರ್ಕ್'. ಹಾಗೆಂದವರನ್ನು ಖಂಡಿತವಾಗಿಯೂ ಧನಿಕರೆಂದು ಗ್ರಹಿಸಬೇಕು. ರಂಗಪ್ಪನವರೂ ಆ 'ಟ್ರೇಡು ಮಾರ್ಕ್'ನ್ನು ಉಪಯೋಗಿಸುತ್ತಿದ್ದರು. ಇದರಿಂದ ಅವರು ಧನಿಕರೆಂಬ ಮಾತು ನಿರ್ವಿವಾದವೆಂದಾಯಿತು. ಈಗಲಂತೂ ಒಂದು ಬ್ಯಾಂಕನ್ನು ಸ್ವತಹ ತೆರೆದಿರುವರು. ಈಗ 'ಕುಬೇರನ ಮರಿ' ಎಂದರೂ ಸರಿಯೆ! ಆದರೆ ಮೇಲೆ ಹೇಳಿದಂತೆ ಪ್ರಾಣಹೋದರೂ ಕಾಸು ಬಿಡುವವರಲ್ಲ. ಆದುದರಿಂದಲೇ ಬ್ಯಾಂಕಿನ ರಂಗಪ್ಪನವರೆಂದರೆ ಭಿಕ್ಷುಕರು ಕೂಡಾ ಬೆಟ್ಟುಮುರಿದು, ಮುಖ ತಿರುಗಿಸುವರು. ಬೇಕೆಂದರೆ ಅವರಲ್ಲಿಗೆ ಯಾರೂ ಹೋಗುತ್ತಿರಲಿಲ್ಲ. ಅಂತಹ ಸ್ವಭಾವದವರು ರಂಗಪ್ಪನವರು.

ಒಂದು ಸಲ ಯಾರೋ ಒಬ್ಬ ಬ್ರಾಹ್ಮಣನು ರಂಗಪ್ಪನವರಲ್ಲಿಗೆ ಬಂದು, ತನ್ನ ಮಗಳ ಮದುವೆಯ ಖರ್ಚಿಗಾಗಿ ಸಹಾಯ ಬೇಡಿದನು. ಆಗ ಸಿಟ್ಟಿಗೆದ್ದ ರಂಗಪ್ಪನವರು "ಮದುವೆಯ ಖರ್ಚಿಗೆ ಬೇಕಷ್ಟು ಹಣವಿಲ್ಲದ ನೀನು, ಮಗಳನ್ನೇಕೆ ಹುಟ್ಟಿಸಿದೆ?" ಎಂದು ಗದರಿಸಿ ಬಿಟ್ಟರಂತೆ. ಹೀಗೆ ಇನ್ನೆಷ್ಟೋ ಉದಾಹರಣೆಗಳಿವೆ. ಈ ಎಲ್ಲಾ ಕಾರಣಗಳಿಂದ ರಂಗಪ್ಪನವರು ತುಂಬಾ ಬೆಳಕಿಗೆ ಬಂದಿರುವರು (?) ಇಂತಹ ಉದಾರಿಗಳ ನೆರೆಯಲ್ಲಿಯೇ ನಮ್ಮ ಬಿಡಾರ.

ಈ ವಿಷಯಗಳನ್ನೆಲ್ಲಾ ಅರಿತಿದ್ದರೂ ನಮ್ಮ ಸಹಪಾಠಿ ಸುಂದರನು ನಮ್ಮ ಮಾತು ಮೀರಿ, ತನ್ನ ವಿದ್ಯೆಗಾಗಿ ಸಹಾಯ ಕೇಳಲು ರಂಗಪ್ಪನವರಲ್ಲಿಗೆ ಹೋದನು. ನಾವು ಏನು ಹೇಳಿದರೂ ಕೇಳಲಿಲ್ಲ.

ಸುಂದರನು ಹೆಸರಿಗೆ ತಕ್ಕಂತೆ ಸುಂದರನಾಗಿದ್ದನಲ್ಲದೆ, ನಮ್ಮ ಕಾಲೇಜಿನ ವರ್ಧಂತ್ಯುತ್ಸವಗಳಲ್ಲಿ ಸ್ತ್ರೀಪಾತ್ರ ವಹಿಸಿ, ಅನೇಕ ಬಾರಿ ಬಹುಮಾನಗಳನ್ನೂ ಪಡೆದಿದ್ದನು. ಕಲಿಯುವುದರಲ್ಲಿ ಬಹಳ ಪ್ರವೀಣ. ಆದರೆ ಹುಟ್ಟಾ ಬಡವನು. ತಂದೆ ತಾಯಿಗಳಿಲ್ಲದೆ ಸೋದರಮಾವನಲ್ಲಿ ಬೆಳೆದವನು. ಈಗೆರಡು ತಿಂಗಳ ಹಿಂದೆ ಮಾವನೂ ಮಡಿದು, ಎಫ್. ಎ. ತರಗತಿಯ ನಂತರದ ವಿದ್ಯೆಗೆ ದಾರಿಕಾಣ ದಾಗಿದ್ದನು. ಆದರೆ ತುಂಬಾ ಗುಣವಂತನು. ಕಲಿಯಬೇಕೆಂಬ ಚಪಲವು ಹೆಚ್ಚಾದುದರಿಂದಲೇ ಸ್ನೇಹಿತರ ಮಾತನ್ನೂ ಮೀರಿ, ರಂಗಪ್ಪನವರ ಸಹಾಯ ಬೇಡಲು ಹೋದುದು.

ರಂಗಪ್ಪನವರು ಮಾತಿನಲ್ಲಿ ಅತಿ ಚಪಲರು. ಎಂತಹ ಕುತರ್ಕಿ ಯನ್ನಾದರೂ ಅರೆ ನಿಮಿಷದಲ್ಲಿ ಸೋಲಿಸಬಲ್ಲರು. ಉಪಾಯದಿಂದಾ ಗದಿದ್ದರೆ ಅಪಾಯದ ಬೆದರಿಕೆ ಹಾಕಿಯಾದರೂ ಗೆದ್ದುಬಿಡುವರು. ಅಂತೆಯೇ ಮನೆಗೆ ಬಂದ ಸುಂದರನ ಯೋಗಕ್ಷೇಮವನ್ನೆಲ್ಲಾ ವಿಚಾರಿಸಿ, ಆ ಮೇಲೆ "ಸುಂದರಾ, ಏನು ಬಂದೆ?" ಎಂದರು.

"ಸ್ವಾಮಿ, ನಾನೀಗ ನಿರ್ಗತಿಕನಾಗಿರುವುದು ತಮಗೆ ತಿಳಿದಿದೆಯಷ್ಟೆ? ಆದರೆ ಎಂ. ಎ. ತನಕ ಓದಬೇಕೆಂದು ಬಹಳ ಆಸೆ ಯಿದೆ. ಆದುದರಿಂದ ಉದಾರಿಗಳಾದ ತಾವು ನನಗೆ ಬೇಕಾದ ಸಹಾಯ ನೀಡುವಿರೆಂಬ ಭರವಸೆ ಮೇಲೆ ಇಲ್ಲಿಗೆ ಬಂದಿರುವೆನು. ವಿದ್ಯೆಗಾಗಿ ಬೇಡುವ ಬಡವನ ಬಯಕೆಯನ್ನು ಪೂರೈಸಬೇಕು." ಎಂದು ಕೈಜೋಡಿಸಿ ಅತ್ತನು.

ಕಲ್ಲಾದರೂ ಕರಗಬಹುದಾದ ಈ ಮಾತುಗಳನ್ನು ಕೇಳಿ, ರಂಗಪ್ಪನವರು ಸಿಟ್ಟಿನಿಂದ, ಮುಖವನ್ನು ದಶಾವತಾರ ಆಟದ ರಾವಣ ನಂತೆ ಕೆಂಪಗೆ ಮಾಡಿಕೊಂಡು, "ಸುಂದರ, ನಡೆ. ಈಗಲೇ ಹೊರಡು. ಏನು? ನಿನಗೆ ಹಣ ಸಹಾಯಮಾಡಬೇಕೇ? ನಿನಗೆ ಸಹಾಯಮಾಡುವೆ ನೆಂದು ನಾನೇನು ಹರಿಕೆಹೊತ್ತಿರುವೆನೇ? ನೀನು ಕಲಿಯದಿದ್ದರೆ ನನಗಾಗುವ ನಷ್ಟವಾದರೂ ಏನು? ಇದ್ದುದನ್ನೆಲ್ಲಾ ನಿನಗೆ ಕೊಟ್ಟು, ನನ್ನ ಮಕ್ಕಳನ್ನು ರಾಮೇಶ್ವರಕ್ಕೆ ಕಳುಹಿಸಬೇಕೇ? ನಿನಗೆ ಕೈಕಾಲು ಗಳು ಸರಿ ಇವೆ. ಎಲ್ಲಿಯಾದರೂ ಹೋಟೇಲಿಗೆ ಹೋಗಿ ದುಡಿದು ಉಣ್ಣು. ನನ್ನಿಂದ ಒಂದು ಚಿಕ್ಕಾಸೂ ಸಿಕ್ಕದು" ಎಂದು ಬಡಬಡನೆ ಮಾತುಗಳನ್ನು ಕಾರಿ, ಚಿಕ್ಕ ಆನೆಯ ಮರಿಯನ್ನೊಳಗೊಂಡಂತಿರುವ ತನ್ನ ಹೊಟ್ಟೆಯನ್ನು ಹೊತ್ತುಕೊಂಡು ಹೊರಗೆ ಹೊರಟೇಬಿಟ್ಟರು.

ಸುಂದರನಿಗೆ, ಬಡತನದ ಹುಣ್ಣಿನ ಮೇಲೆ ರಂಗಪ್ಪನವರ ಮಾತುಗಳ ಬರೆ ಕೊಟ್ಟಂತಾಯಿತು. ತನ್ನ ಸುಂದರ ಮುಖವನ್ನು ಲಿಂಬೇಹಣ್ಣಿನಷ್ಟು ಸಣ್ಣದು ಮಾಡಿಕೊಂಡು ಬಂದು, ಕೋಣೆಯಲ್ಲಿ ಮಲಗಿ ಬಿಟ್ಟನು. ಮತ್ತು ರಂಗಪ್ಪನವರ ಮಾತುಗಳನ್ನೇ ಯೋಚಿ ಸುತ್ತಾ ಅಳತೊಡಗಿದನು. ಸ್ನೇಹಿತರು ಎಷ್ಟು ರೀತಿಯಲ್ಲಿ ಅಳುವಿನ ಕಾರಣ ಕೇಳಿದರೂ ಹೇಳಲಿಲ್ಲ. ಕಡೆಗೆ ನಮ್ಮ ಬಲಾತ್ಕಾರಕ್ಕಾಗಿ ಎಲ್ಲವನ್ನೂ ವಿವರಿಸಿದನು. ಆಗ ನಮಗೆ ಸುಂದರನಿಗಾದುದಕ್ಕಿಂತಲೂ ಹೆಚ್ಚಿನ ವೇದನೆಯಾಯಿತು. ಆದರೂ ಅದನ್ನು ಮರೆಮಾಡಿಕೊಂಡು ಸುಂದರನನ್ನು ಸಮಾಧಾನ ಪಡಿಸಿ, ರಂಗಪ್ಪನವರಿಗೆ ಬುದ್ಧಿಕಲಿಸಲು ನಿಶ್ಚಯಿಸಿದೆವು ಸುಂದರನನ್ನು ಅಂದೇ ಅವನ ಊರಿಗೆ ಕಳುಹಿಸಿ ಬಿಟ್ಟೆವು.

❀ ❀ ❀ ❀ ❀ ❀

ಸುಂದರನು ವೈರಾಗ್ಯ ತಾಳಿ ಊರಿಗೆ ಹೊರಟು ಹೋದ ದಿನವೇ ಉಡುಪಿಯ ಮಾತಾರ್ಾಂಡಪ್ಪನವರ ಮಗಳು ಸುಂದರಿಯು ಬಿ. ಎ.

ಕಲಿಯುವುದಕ್ಕಾಗಿ ಬಂದಿದ್ದು, ನಮ್ಮ ಬಿಡಾರದಲ್ಲಿಯೇ ಇಳಿದು ಕೊಂಡಳು. ಸುಂದರಿಯು ಬಿ. ಎ. ಕಲಿಯತಕ್ಕವಳು. ಅಂದಮೇಲೆ ರೂಪ, ಬೆಡಗು, ವೈಯ್ಯಾರಗಳಿಗೇನೂ ಕಡಿಮೆ ಇರಲಿಲ್ಲ. ಸ್ತ್ರೀಸಹಜ ವಾದ ಲಜ್ಜೆಯನ್ನು ಆಕೆಯು ಎಂದೋ ಮಾರಿಬಿಟ್ಟಿದ್ದಳು.

ಸ್ವಲ್ಪ ಹೊತ್ತಿನಲ್ಲೇ ನಮಗೆಲ್ಲಾ ಆಕೆಯ ಪರಿಚಯವಾಯಿತು. ಸುಂದರಿಯು ಆ ವಿಚಾರ ಈ ವಿಚಾರ ಮಾತಾಡಿ, ರಂಗಪ್ಪನವರ ಪರಿಚಯವನ್ನೂ ನಮ್ಮಿಂದ ತಿಳಿದುಕೊಂಡಳು. ಮತ್ತು ಮರುದಿನ ಸಂಜೆ ಸಮಯ ರಂಗಪ್ಪನವರಲ್ಲಿಗೆ ಹೋದಳು. ರಂಗಪ್ಪನವರು ಸುಂದರಿಯನ್ನೇ ನೋಡುತ್ತಾ "ನಿಮಗೆಲ್ಲಿ?" ಎಂದರು.

ಸುಂದರಿಯು ನಸುನಗುತ್ತಾ ತನ್ನ ಸ್ಥಿತಿಯನ್ನೆಲ್ಲಾ ಏನೇನೋ ಹೇಳಿ, "ರಾಯರೇ, ನನ್ನ ವಿದ್ಯೆಗೆ ನೀವೇನಾದರೂ ಸಹಾಯ ಮಾಡ ಬಲ್ಲಿರಾ?" ಎಂದು, ನೆಲವನ್ನು ಉಗುರಿನಿಂದ ಗೀರುತ್ತಾ ಕೇಳಿದಳು. ಪ್ರತ್ಯಕ್ಷ ಪರಮೇಶ್ವರನೇ ವರವೀಯಲು ಎದುರು ಬಂದಿದ್ದರೂ ಆಗಲಾರದಷ್ಟು ಆನಂದವು ರಂಗಪ್ಪನವರಿಗಾಯಿತು!

"ಸುಂದರೀ, ಎಲ್ಲವೂ ನಿನ್ನದಾಗಿದೆ. ವಿದ್ಯೆಗಾಗಿ ದಾನಮಾಡ ದವನು ಮನುಷ್ಯನೆನಿಸಿಕೊಳ್ಳುವನೇ? ಅದರಲ್ಲೂ ನಿಮ್ಮಂತಹರು ಇಲ್ಲಿ ತನಕ ಬಂದು ಕೇಳುವ ಆವಶ್ಯಕತೆಯೇ ಇಲ್ಲ. ಕುಳಿತಲ್ಲೇ ಒಂದು ಚೀಟಿ ಕಳುಹಿಸುತ್ತಿದ್ದರೆ ಹಣವು ನಿಮ್ಮ ಕಾಲಬಳಿಗೆ ಬರು ತ್ತಿತ್ತು. ನೀವು ದಣಿಯಬೇಕಿತ್ತೇ? ಆಗಲಿ, ಈಗ ನಿಮಗೆಷ್ಟು ಹಣ ಬೇಕು?" ಎಂದರು ಉದಾರಿಗಳು.

ಸುಂದರಿಯು ತನ್ನ ಜಾಣ್ಮೆಯಿಂದ ರಂಗಪ್ಪನವರನ್ನು ಸಂಪೂರ್ಣ ವಶಪಡಿಸಿಕೊಂಡು "ಸ್ವಾಮೀ, ನನಗೆ ಈಗ ಇನ್ನೂರು ರೂಪಾಯಿ ಗಳು ಬೇಕು" ಎಂದಳು. ರಾಯರು ದೆವ್ವ ಬಡಿದವರಂತೆ, ಸುಂದರಿ

ಯನ್ನು ನೋಡುತ್ತಾ, ಟ್ರೆಜರಿಯಿಂದ ಇನ್ನೂರು ರೂಪಾಯಿಗಳನ್ನು ತೆಗೆದು ಸುಂದರಿಗೆ ಕೊಟ್ಟು, "ಮತ್ತೆ ಬೇಕಾದಲ್ಲಿ ಕೇಳಬಹುದು" ಎಂದರು.

ಸುಂದರಿಯು ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಾ "ಶ್ರೀಮಂತರೇ ನನ್ನ ಬಿಡಾರಕ್ಕೆ ಯಾವಾಗ ಬರುವಿರಿ?" ಎಂದಳು. ಈ ಮಾತುಗಳಿಂದ ರಂಗಪ್ಪನವರು ನೆಲ ಬಿಟ್ಟು ಒಂದು ಗಜ ಮೇಲೇರಿ ಬಿಟ್ಟರು. ಮತ್ತು "ನೀನು ಇಷ್ಟಪಟ್ಟು ಬರಹೇಳಿದ ಮೇಲೆ ತಡಮಾಡಬೇಕೆ? ಇಂದೇ ರಾತ್ರಿ ಬರುವೆನು" ಎಂದು ಹಸನ್ಮುಖರಾಗಿ ಹೇಳಿದರು. ಸುಂದರಿಯು ಕಣ್ಣು ಮಿಟಕಿಸುತ್ತಾ, ಮುಗುಳ್ನಗುತ್ತಾ ಹೋಗಿಬಿಟ್ಟಳು.

ಸಂತೋಷಾತಿರೇಕದಿಂದ ಮೈಮರೆತ ರಂಗಪ್ಪನವರು ಅಂದು ರಾತ್ರೆ ಒಳ್ಳೊಳ್ಳೆಯ ಉಡುಪುಗಳನ್ನು ಧರಿಸಿಕೊಂಡು, ಸೆಂಟನ್ನು ಮೈಗೆಲ್ಲಾ ಹೊಯ್ದುಕೊಂಡು ಗಾಳಿಯಲ್ಲಿ ಅದರ ನಾತವನ್ನು ಹರಡಗೊಟ್ಟು, ಬೇಗ ಬೇಗನೇ ಸುಂದರಿಯ ಕೊಠಡಿಗೆ ನಡೆದರು. ಆಕೆಯು ಆಗ ಆರಾಮ ಕುರ್ಚಿಯಲ್ಲಿ ಕುಳಿತಿದ್ದಳು. ರಂಗಪ್ಪನವರನ್ನು ಕಂಡು "ಸ್ವಾಮಿ, ಹೀಗೆ ಬನ್ನಿ, ಬಡವರ ಮನೆಗೆ ಭಾಗ್ಯ ಬಂದಂತಾಯಿತು" ಎಂದು ಉಪಚರಿಸಿದಳು. ಮತ್ತು, "ರಾಯರೆ, ವಿದ್ಯೆಗಾಗಿ ಸಹಾಯ ಮಾಡದವನು ಮನುಷ್ಯನಲ್ಲವೆಂದು ನೀವು ಹೇಳಿದಿರಲ್ಲವೇ? ಹಾಗಾದರೆ, ನಿನ್ನೆ ಆ ಸುಂದರನು ಬಂದು ಸಹಾಯ ಕೇಳಿದಾಗ ಕೊಡಲಿಲ್ಲವೇಕೆ?" ಎಂದು ರಾಯರನ್ನೊಮ್ಮೆ ನೋಡಿದಳು. ತರುಣಿಯ ಈ ಮಾತುಗಳನ್ನು ಕೇಳಿ ರಾಯರಿಗೆ ತಣ್ಣೀರು ಎರಚಿದಂತಾಯಿತು. ಬಲೆಗೆ ಬಿದ್ದ ಹಕ್ಕಿಯು ಹಾರಿ ಹೋದೀತೆಂಬ ಭಯದಿಂದ ಬೇಗನೇ ಕಂಠ ಸರಿಪಡಿಸಿಕೊಂಡು, "ಮನೋಹರೇ, ಸುಂದರನೆಂಬವನನ್ನು ನಾನಿದುವರೆಗೆ ಕಂಡೇ ಇಲ್ಲ. ಅಂದ ಮೇಲೆ ಆತನು

ಕೇಳಿದುದಾರೂ ನಿಜವೆ? ಅದನ್ನೆಲ್ಲಾ ಬಿಟ್ಟು ಬಿಡು. ಸುಂದರನೋ, ಗಿಂದರನೋ, ನಾನರಿಯೆ." ಎಂದರು.

"ಓಹೋ, ಆತನನ್ನು ನೀವಿದುವರೆಗೆ ನೋಡಿಲ್ಲವೇ? ಹಾಗಿದ್ದರೆ ಈಗಲಾದರೂ ನೋಡಿರಿ," ಎಂದು ತಾನುಟ್ಟ ಸೀರೆ, ಕುಪ್ಪಸಗಳನ್ನೆಲ್ಲಾ ಕಳಚಿ, ಕೃತಕ ಜಡೆಯನ್ನು ಸುಂದರನು ಕಿತ್ತುಹಾಕಿದನು. ಆಗ ನಾವೆಲ್ಲರೂ ಕೋಣೆಯ ಒಳಹೊಕ್ಕೆವು. ಸುಂದರನು ನಗುತ್ತಿದ್ದನು. ಆಗ ನಮ್ಮವರಲ್ಲೊಬ್ಬನು "ಸುಂದರಾ, ಆ ಸುಂದರಿ ಎತ್ತ ಹೋದಳು? ಇವರೇಕೆ ಬಂದುದು?" ಎಂದನು. ಆಗ ಸುಂದರನು, "ನಿಮ್ಮೆಲ್ಲರ ಕರುಣೆಯಿಂದ ಸುಂದರಿಯು ಈ ಉದಾರಿಗಳಿಗೆ ತಕ್ಕ ಶಾಸ್ತಿ ಮಾಡಿ, ಈಗ ನನ್ನಲ್ಲೇ ಐಕ್ಯವಾಗಿರುವಳು" ಎಂದು ಮುಖದ ಪೌಡರ್ ತೆಗೆಯಲು ಪ್ರಾರಂಭಿಸಿದನು. ನಾವು ರಂಗಪ್ಪನವರ ಕಿವಿ ಕಿವುಡಾಗುವಂತೆ ನಕ್ಕೆವು.

ಉದಾರಿ ರಂಗಪ್ಪನವರ ನಾಡಿ ಬಡಿಯಲು ಪ್ರಾರಂಭಿಸಿದುದು ಡಾಕ್ಟರರ ಚಿಕಿತ್ಸೆಯಾದ ಮೇಲೆಯೆ!



# ೧೪. ಚಮತ್ಕಾರದ ಫಲ



ಸೂರ್ಯನಿನ್ನೂ ನಡುನೆತ್ತಿಯ ಮೇಲೆ ಬರಲಿಲ್ಲ. ಸುಮಾರು ಹನ್ನೊಂದು ಘಂಟೆಯಾಗಿರಬಹುದು. ಶಾಲೆಯಲ್ಲಿ ಮಕ್ಕಳಿದ್ದಾರೊ, ಇಲ್ಲವೋ ಎಂಬುದೇ ಕಷ್ಟದ ಪ್ರಶ್ನೆಯಾಗಿತ್ತು. ಕಾರಣ? ಮಾಸ್ತರರಾದ ಶ್ಯಾಮಯ್ಯಂಗಾರಿಯವರ ಬೆದರಿಕೆಗೆ ಹೆದರಿ ಮಕ್ಕಳು, ಮಾಸ್ತರರು ಕೊಟ್ಟ ಪೆಪ್ಪರ್ ಮಿಠಾಯಿ ಜಗಿಯುತ್ತಾ, ಉಸಿರೆತ್ತದೆ, ಕಣ್ಣು ಮಿಟಿಕಿಸುತ್ತಾ, ಕುಳಿತಿದ್ದರು. ಮಾಸ್ತರರು ನಿಮಿಷಕ್ಕೊಮ್ಮೆ ಜಗಲಿಗೆ ಬಂದು, ಮುಂಡಾಸನ್ನು ಸರಿಪಡಿಸಿಕೊಳ್ಳುತ್ತಾ, ತನ್ನ ಹಳೆಸಮೂನೆಯ ಕನ್ನಡಕದ ಮೂಲಕ ಮಾರ್ಗವನ್ನು ನೋಡುತ್ತಿದ್ದರು. ಆಗಾಗ ಅವರ ಮುಖದಲ್ಲಿ ಬೇಸರದ ಚಿಹ್ನೆಯು ಮೂಡಿಬರುತಿತ್ತು. ಅದರಿಂದ ಅವರು ಯಾರ ಬರವನ್ನೋ ಹಾರೈಸುತಿದ್ದಂತೆ ಕಂಡುಬರುತಿತ್ತು. ಆಗಲೇ ಶಾಲಾ ಗೋಡೆಯಲ್ಲಿ ನೇತಾಡುತ್ತಿದ್ದ ಗಡಿಯಾರವು ಬಹುಕಷ್ಟದಿಂದ ಹನ್ನೆರಡು ಬಾರಿ ಬಡಿದುಕೊಂಡು ಸುಮ್ಮನಾಯಿತು. ಮಕ್ಕಳೆಲ್ಲರೂ ಗಲಾಟೆಗಾರಂಭಿಸಿದರು. ಮಾಸ್ತರರು ಯಾರನ್ನು ಕಾಯುತ್ತಿದ್ದರೋ ಅವರು ಇನ್ನೂ ಬರುವ ಸಂಭವವೆ ಕಾಣಲಿಲ್ಲ. ಹುಡುಗರೆಲ್ಲಾ ಒಟ್ಟಾಗಿ, "ಮಾಸ್ತರರೇ, ಘಂಟೆ ಹನ್ನೆರಡಾಯಿತು. ಆ ಆಫೀಸರರು ಬಾರದಿದ್ದರೆ ನಮಗೇನು? ತಿಪ್ಪಾಭಟ್ಟರಲ್ಲಿಗೆ ಹೋಗುವರೆ ವೇಳೆಯಾಯಿತು. ಕಡೆಗೆ ಹೋಳಿಗೆ, ಪರಮಾನ್ನ, ದಕ್ಷಿಣೆಗಳಿಗೆ ಸೊನ್ನೆ ಬೀಳಬಹುದು. ನಾವು ಹೋಗುವೆವು." ಎಂದು ಹೇಳಿ ಮಾಸ್ತರರ ಉತ್ತರದ ಕಡೆಗೆ ಕಿವಿಗೊಡದೆ, ಮದುವೆ ಊಟಕ್ಕೆ ನಡೆದರು.

ಮಾಸ್ತರರ ಗಂಟಲು ಒಣಗಿತು. ಅದು ಗ್ರ್ಯಾಂಟು ಸ್ಕೂಲು. ಅಂದು ವಿದ್ಯಾಧಿಕಾರಿಗಳು ಶಾಲಾ ಪರೀಕ್ಷೆಗಾಗಿ ಬರುವರೆಂದು, ಅಯ್ಯಂಗಾರಿಯವರಿಗೆ ಮೊದಲೇ ನೋಟೀಸು ಬಂದಿತ್ತು. ಅಧಿಕಾರಿಗಳು ಬರುವಾಗ ಶಾಲೆ ತುಂಬಾ ಮಕ್ಕಳಿಲ್ಲದಿದ್ದರೆ, ಆ ವರ್ಷದ ಗ್ರ್ಯಾಂಟಿಗೆ ಸೊನ್ನೆ ಬೀಳುವ ಸಂಭವ ಬರುವುದು. ಅದಕ್ಕಾಗಿಯೇ ಮಾಸ್ತರರು ಎಂಟು ದಿನ ಊರಲ್ಲೆಲ್ಲಾ ಸುತ್ತಾಡಿ, ಪಂಥೇರು ಸಕ್ಕರೆ ಖರ್ಚುಮಾಡಿ ಊರಿನ ಮಕ್ಕಳನ್ನೆಲ್ಲಾ ಅಂದು ಶಾಲೆಯಲ್ಲಿ ಕೂಡ ಹಾಕಿದ್ದರು. ಆದರೆ ಅಂದು ತಿಪ್ಪಾಭಟ್ಟರಲ್ಲಿ ಮದುವೆ ಊಟವಿದ್ದುದರಿಂದ ಹನ್ನೆರಡು ಘಂಟೆಯಾದೊಡನೆ ಮಕ್ಕಳೆಲ್ಲರೂ ಅಲ್ಲಿಗೆ ಹೊರಟೇ ಹೋದರು. ಮಿಠಾಯಿಗಾಗಿ ಬಂದಿದ್ದ ಮಕ್ಕಳು ಇನ್ನು ಪುನಃ ಶಾಲೆಗೆ ಬರಲಾರರೆಂದು ಮಾಸ್ತರರಿಗೆ ಮೊದಲೇ ತಿಳಿದಿತ್ತು. ಆದುದರಿಂದಲೇ ಅವರು ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡು 'ಈ ವರ್ಷದ ಅನ್ನವೇ ಹೋಯಿತಲ್ಲಾ!' ಎಂದು ವ್ಯಸನಪಟ್ಟು ಮೇಜಿಗೊರಗಿ ಕುಳಿತುಬಿಟ್ಟರು.

ಈ ವ್ಯಸನದಿಂದ ಅವರಿಗೆ ಭೋಜನವೂ ಬೇಡವಾಗಿ, ಅಲ್ಲೇ ಮಲಗಿ ಬಿಟ್ಟರು. ಮಾಸ್ತರರು ಮತ್ತೆ ಎಚ್ಚತ್ತಾಗ ಮೂರು ಘಂಟೆಯಾಗಿತ್ತು. ಶಾಲೆಯಲ್ಲಿ ಹನ್ನೊಂದು ಮಕ್ಕಳು ಮಾತ್ರ ಹಾಜರಿದ್ದರು. ಇಡೀ ಶಾಲೆಯಲ್ಲಿ ಹನ್ನೊಂದೇ ಮಕ್ಕಳಿದ್ದುದನ್ನು ಕಂಡು ಅವರ ಜೀವವೇ ಹಾರಿದಂತಾಯಿತು.

ಆಗ ದೂರದಲ್ಲಿ, ಬಿಲ್ಲೆಯನ್ನು ಧರಿಸಿಕೊಂಡ ಪೇದೆಯ ಆಗಮನವು ಕಂಡಿತು. ಹಿಂದಿನಿಂದಲೇ ಅಧಿಕಾರಿಗಳೂ ಕಂಡುಬಂದರು. ಆಗ ಮಾತ್ರ ಮಾಸ್ತರರ ಎದೆಗುಂಡಿಗೆಯ ಚಲನೆಯೇ ನಿಂತು ಹೋಯಿತು. ಏನು ಮಾಡಬೇಕೆನ್ನುವುದೇ ಅಯ್ಯಂಗಾರಿಯವರಿಗೆ ಗೊತ್ತಾಗಲಿಲ್ಲ. ಆದರೂ ತನ್ನ ಶರೀರದಲ್ಲಿನ ಧೈರ್ಯವನ್ನೆಲ್ಲಾ ಒಟ್ಟು

ಕೂಡಿಸಿಕೊಂಡು, ಆಫೀಸರರ ಎದುರಿಗೆ ಹೋಗಿ ಒಂದು ನಮಸ್ಕಾರ ಹೊಡೆದು ಬಿಟ್ಟರು. ಮತ್ತು ಜಾಣತನದಿಂದ ಅವರನ್ನು ಆಫೀಸು ಕೋಣೆಗೇ ಕರೆದೊಯ್ದರು. ಅಲ್ಲಿ ಮೊದಲೇ ತಂದಿಟ್ಟಿದ್ದ ಸೀಯಾಳ, ಬಾಳೆಹಣ್ಣುಗಳನ್ನು ಕೊಟ್ಟು "ಇಲ್ಲಿ ಚೆನ್ನಾಗಿ ಗಾಳಿ ಬರುವುದು" ಎನ್ನುತ್ತಾ ಮೆತ್ತಗೆ ಕುಳಿತುಕೊಂಡರು.

ಆಫೀಸರರು ಸೀಯಾಳ ಕುಡಿದು ದಣುವಾರಿಸಿಕೊಂಡು, "ಮಾಸ್ತರರೇ, ಇಂದಿನ ಹಾಜರಿ ತೆಗೆದು ತನ್ನಿರಿ. ನನಗೆ ಸ್ವಲ್ಪ ಬೇಸರವಿದೆ" ಎಂದು ಹೇಳಿದರು. ಹಾಜರಿಪಟ್ಟಿಯನ್ನು ಕೈಯಲ್ಲಿ ಹಿಡಿದುಕೊಂಡು ನಡುಗುತ್ತಾ, ಮನಸ್ಸಿನಲ್ಲಿ "ಕೃಷ್ಣಾ, ಅಂದು ದ್ರೌಪದಿಯ ಮಾನವನ್ನು ಕಾದಂತೆ, ಇಂದು ನನ್ನ ಮಾನವನ್ನು ಕಾದು ಕೊಡು!" ಎನ್ನುತ್ತಾ ಮಾಸ್ತರರು ಕ್ಲಾಸಿನೊಳಕ್ಕೆ ಕಾಲಿಟ್ಟರು. ಅಧಿಕಾರಿಗಳು ಆಫೀಸು ರೂಮಿನಲ್ಲಿಯೇ ತೂಕಡಿಸುತ್ತಾ ಕುಳಿತಿದ್ದರು.

ಕ್ಲಾಸಿಗೆ ಬಾರದೆ ಕೂತಲ್ಲೇ ಇರುವ ಅಧಿಕಾರಿಗಳನ್ನು ಮಾಸ್ತರರು ಮನಸ್ಸಿನಲ್ಲೇ ಹೊಗಳುತ್ತಾ ಹಾಜರಿಪಟ್ಟಿ ಬಿಡಿಸಿದರು. ಅಲ್ಲದೆ ಪರಮಾತ್ಮನ ನಾಮಸ್ಮರಣೆಮಾಡಿ, ಇದ್ದ ಹನ್ನೊಂದು ಮಕ್ಕಳಿಗೆ ಏನೋ ಕಣ್ಣುಸನ್ನೆಮಾಡಿ, ದೊಡ್ಡ ಸ್ವರದಿಂದ "ರಾಮು, ಕೃಷ್ಣ, ದೂಮು, ತಿಮ್ಮ, ಅಬ್ದುಲ್ಲ, ಸುನಂದಾ" ಎಂದು ೩೫ ಹೆಸರುಗಳನ್ನು 'ಪಟಪಟನೆ' ಉಚ್ಚರಿಸಿಬಿಟ್ಟರು. ಆ ಮಕ್ಕಳಿಂದಲೇ ೩೫ ಸಲವೂ 'ಪ್ರಜಂಟ್' (Present) ಎಂಬ ಉತ್ತರವು ಕ್ರಮವಾಗಿ ಹೊರಟಿತು.

ಹಾಜರಿ ಕರೆದಾದ ಮೇಲೆ, ಮಾಸ್ತರರು ಗಟ್ಟಿಯಾಗಿ "ಮಕ್ಕಳೇ ರಾಗದಿಂದ ಒಂದು ಪದ ಹೇಳಿರಿ" ಎಂದರು. ಒಡನೆ ಮಕ್ಕಳು ದೊಡ್ಡ ಧ್ವನಿಯಿಂದ "ಸ್ವಾಮಿ ದೇವನೆ ಲೋಕಪಾಲನೆ" ಎಂಬ ಪದ್ಯವನ್ನು ಹಾಡತೊಡಗಿದರು. ಮಕ್ಕಳ ಈ ಪದವು ಅಧಿಕಾರಿಗಳಿಗೆ

ಲಲ್ಲೆ ಹಾಡಿದಂತಾಗಿ ಅಲ್ಲೇ ಜೊಂಪು ಹತ್ತಿಬಿಟ್ಟಿತು. ಮಾಸ್ತರರು ಮಕ್ಕಳನ್ನು ಮನೆಗೆ ಕಳುಹಿಸಿಬಿಟ್ಟರು.

ಆ ಮೇಲೆ ಅವರು ಹಾಜರಿ ಪಟ್ಟಿಯನ್ನು ಅಧಿಕಾರಿಗಳ ಮುಂದಿಟ್ಟರು. ಆಫೀಸರರು ಕಣ್ತೆರೆದು ಪಟ್ಟಿಯಲ್ಲಿ ೭೫ ಮಕ್ಕಳು ಹಾಜರಿದ್ದುದನ್ನು ಕಂಡು ಸಂತೋಷಪಟ್ಟರು. ಮತ್ತು 'ಇನ್ಸ್‌ಪೆಕ್ಶನ'' ಪುಸ್ತಕವನ್ನು ತೆಗೆದು, 'ಶಾಲೆಯಲ್ಲಿ ಎಪ್ಪತ್ತೈದು ಮಕ್ಕಳು ಹಾಜರಿದ್ದರು'. ಈ ಶಾಲೆಯು ಬಹಳ ಉತ್ತಮ ಸ್ಥಿತಿಯಲ್ಲಿದೆ. ಉಪಾಧ್ಯಾಯರು ಹೆಚ್ಚಿನ ಶ್ರಮ ವಹಿಸಿಕೊಂಡು ಕೆಲಸಮಾಡುತ್ತಿರುವರು. ಆದುದರಿಂದ ಈ ವರ್ಷ ಶೇಕಡಾ ೭೦ರಷ್ಟು ಹೆಚ್ಚು ಗ್ರೇಂಟು ಕೊಡಬಹುದು. ಎಂದು ಬರೆದು ದಸ್ಕತು ಮಾಡಿ ಹೊರಡಲನುವಾದರು. ಮಾಸ್ತರರು ಅವರಿಗೆ ಮತ್ತೊಮ್ಮೆ ಲಘು ಫಲಾಹಾರ ಮಾಡಿಸಿ, ಹಳ್ಳಿಯ ಕೊನೆವರೆಗೂ ಹೋಗಿ, ಅವರನ್ನು ಬೀಳ್ಕೊಟ್ಟು ಹಿಂತಿರುಗಿ ಬಂದರು.

"ಎಷ್ಟು ಪ್ರಯತ್ನಿಸಿ ಕೆಲಸ ಮಾಡಿದರೂ ಪ್ರತಿ ವರ್ಷ ಇನ್ನೂರಕ್ಕಿಂತ ಹೆಚ್ಚು ಗ್ರೇಂಟು ಈ ಶಾಲೆಗೆ ಬರುತ್ತಿದ್ದಿಲ್ಲ. ಈಗ ಇನ್ನೂರಕ್ಕೆ ನೂರ ಇಪ್ಪತ್ತು ಕೂಡಿಸಿ, ಮುನ್ನೂರ ಇಪ್ಪತ್ತು ರೂಪಾಯಿಗಳು ಸಿಗುವಂತಾಯಿತಲ್ಲಾ!" ಎಂದು ಕೊಂಡು ಮಾಸ್ತರರು ತನ್ನ ಚಮತ್ಕಾರಕ್ಕೆ ತಾನೇ ಮೆಚ್ಚಿಕೊಂಡು ಮನೆಗೆ ಮರಳಿದರು.

ಮುನ್ನೂರ ಇಪ್ಪತ್ತು ರೂಪಾಯಿ ಗ್ರೇಂಟು ತೆಗೆದುಕೊಂಡ ಆ ಮಾಸ್ತರರು, ಮತ್ತೆ ಶಾಲೆಯ ಬೀಗ ತೆಗೆದುದು ಮುನ್ನೂರ ಅರುವತ್ತೈದು ದಿನಗಳ ಮೇಲೆಯೇ ಎಂದು ಎಲ್ಲರಿಗೂ ತಿಳಿದಿದೆ!



# ೧೫. ಅವನ ಪಾಠ



ನ್ನೊಬ್ಬರ ಅನುಕರಣೆ ಮಾಡಲಿಕ್ಕೆ ಸಂಗಣ್ಣನಿಗೆ ಯಾರೂ ಕಲಿಸಿಕೊಡಬೇಕಾಗಿಲ್ಲ. ಒಬ್ಬರು ವರ್ತಿಸಿದಂತೆಯೇ ವರ್ತಿಸಿ ತೋರಿಸುವನು. ಇದರಿಂದಾಗಿ ಕೆಲವು ಸಲ ಅನೇಕರು ಇವನ ಮೇಲೆ ಸಿಟ್ಟಾದುದೂ ಉಂಟು. ತಮ್ಮ ಚಾಳಿಯನ್ನು ತೋರಿಸಿದುದೇ ಅವರ ಸಿಟ್ಟಿಗೆ ಕಾರಣ. ನೆರಳಾದರೂ ತಪ್ಪಿ ಬೀಳಬಹುದು, ಸಂಗಣ್ಣನು ಇನ್ನೊಬ್ಬರ ರೀತಿ ತೋರಿಸುವಾಗ ತಪ್ಪಿಬೀಳಲಾರನು. ಆದುದರಿಂದಲೇ ಸಂಗಣ್ಣನಿಗೆ ಬಲು ಹೆಮ್ಮೆ. ಎಲ್ಲರೂ ಕೊಂಡಾಡಿ ಹೊಗಳುತ್ತಿರುವರೆಂಬ ಹೆಗ್ಗಳಿಕೆ. ಒಮ್ಮೆ ಸಂಗಣ್ಣನು ದೂರದಲ್ಲಿ ಬರುವುದನ್ನು ಕಂಡು ತಹಶಿಲ್ದಾರರೇ ಬಂದರೆಂದು, ಶ್ಯಾನುಭೋಗರು, ಪಟೇಲರು ಕೂಡಾ ಭ್ರಮಿಸಿದ್ದರು. ಅವನ ಆಗಿನ ಮುಂಡಾಸನ್ನಾಗಲೀ, ನಡೆಯುವ ರೀತಿಯನ್ನಾಗಲೀ ಕಂಡರೆ, ಅವನು ತಹಶಿಲ್ದಾರನಲ್ಲವೆಂದು ಥಕ್ಕನೆ ಯಾರಿಂದಲೂ ಹೇಳುವರೆ ಸಾಧ್ಯವಿಲ್ಲದಂತಿತ್ತು. ಇದೇ ರೀತಿಯಾಗಿ ಎಷ್ಟೋ ಜನರು ಮೋಸಹೋದುದಿದೆ. ಇದು ಸಂಗಣ್ಣನಿಗೊಂದು ತಮಾಷೆಯ ಆಟ.

ಒಮ್ಮೆ ನಂಗಪ್ಪನು ಮೂಗಿನ ತುದಿಯ ವರೆಗೆ ಹೆಂಡ ಕುಡಿದು ಮಾರ್ಗದಲ್ಲಿ ಬಹಳ ಪೌರುಷ ಕಾಣಿಸಿ, ಅಂಗಿ ಕೈ ಮೇಲೆ ಮಾಡಿ ಮಾತಾಡಿ ಬಹಳ ಪ್ರಸಿದ್ಧನಾದುದನ್ನು ಕಂಡ ಸಂಗಣ್ಣನಿಗೆ, ತಾನೂ ಒಂದು ಸಲ ನಂಗಪ್ಪನ ಹಾಗೆಯೇ ಮಾಡಿ ನೋಡಬೇಕೆಂಬ ಆಸೆಯಾಯಿತು. ನಂಗಪ್ಪನಿಗೆ ಅಪಮಾನಮಾಡಬೇಕೆಂಬುದೇ ಅವನ ಗುರಿ.

ಯೋಚನೆಯಾದುದೇ ತಡ. ಅದನ್ನು ಕಾರ್ಯರೂಪಕ್ಕೆ ಹಚ್ಚಿ ಬಿಡಬೇಕೆಂದು ನಿಶ್ಚಯಿಸಿದನು. ತಾನು ನೆನೆದ ಕಾರ್ಯವು ಯಶಸ್ವಿ ಯಾಗಿ ಜರಗಿತೆಂದರೆ ಎಲ್ಲರೂ ತನ್ನನ್ನು ಹೊಗಳುವರೆಂದು ಭಾವಿಸಿ ದನು. ಪತ್ರಿಕೆಗಳಲ್ಲಿ ತನ್ನ ಹೆಸರು ಬೀಳಬಹುದೆಂದು ಯೋಚಿಸಿದನು. ಈ ಎಲ್ಲಾ ಭಾವನೆಗಳಿಂದಾಗಿ ಸಂಗಣ್ಣನಿಗೆ ರಾತ್ರಿಯ ನಿದ್ರೆಗೆ "ಜ್ಝೀರೊ" ಆಯಿತು.

ಸಂಗಣ್ಣನು ಉಕ್ಕಿಬರುತ್ತಿರುವ ಉತ್ಸಾಹವನ್ನು ಮರುದಿನ ಸಂಜೆಯ ತನಕ ಹೇಗಾದರೂ ಸೈರಿಸಿಕೊಂಡನು. ಹಾಗೂ ಹೀಗೂ ಮಾಡಿ, ಇಳೀಹೊತ್ತಿಗೆ ಸರಿಯಾಗಿ ಸುರೆಯಂಗಡಿಯನ್ನು ಹೊಕ್ಕು, ಹೊಟ್ಟೆ ಬಿರಿಯುವ ತನಕ ಕುಡಿದುಬಿಟ್ಟನು. ಕಡೆಗೂ ನಂಗಪ್ಪನಂತೆ "ಏಕ್ಟ್" ಮಾಡದೆ ಬಿಡಲಾರೆನೆಂದು ಇನ್ನಷ್ಟು ಸುರೆಯನ್ನು ಉದರ ದೊಳಕ್ಕೆ ಅಟ್ಟಿಬಿಟ್ಟನು.

ಇಷ್ಟಾಗುವಾಗ ಸಂಗಣ್ಣನ ತಲೆಯು ಬೊಗರಿಯಂತೆ ತಿರುಗ ಲಾರಂಭಿಸಿತು. ಆದರೆ ಸಂಗಣ್ಣನ ಪಾಲಿಗೆ ಭೂಮಿಯೇ ತಿರುಗ ಲಾರಂಭಿಸಿತು. ಈಗ ಸಂಗಣ್ಣನ ಆತ್ಮದ ಜೊತೆಗೆ ಇನ್ನೊಬ್ಬನು ಸೇರಿ ದಂತಾಯಿತು. ತಲೆಯಲ್ಲಿ ಇಬ್ಬರು ಭರದಿಂದ ಕೆಲಸ ಮಾಡಲಾರಂಭಿ ಸಿದರು. ಆ ಮೇಲೆ ಮೆತ್ತಗೆ ಹೆಂಡದಂಗಡಿಯಿಂದ ಹೊರಟ ಸಂಗಣ್ಣನು ಎದುರು ಸಿಕ್ಕಿದ ಕಂಭ ಗೋಡೆಗಳಿಗೆಲ್ಲಾ ಮುದ್ದು ಕೊಡುತ್ತಾ ಮಾರ್ಗಕ್ಕಿಳಿದನು. ಇಳಿದವನೇ ಚರಂಡಿಯ 'ಇನಸ್ಪೆಕ್ಷನಿ' ಗೆಂದು ಫಕ್ಕನೆ ಕೆಳಗಿಳಿದನು. ಅಲ್ಲಿ ಒದ್ದಾಡುತ್ತಾ "ಈ ಡಿಸ್ಟ್ರಿಕ್ಟು ಬೋರ್ಡಿನವರಿಗೆ ಏನೂ ಬುದ್ಧಿ ಇಲ್ಲ. ಇರುತ್ತಿದ್ದರೆ, ಮಾರ್ಗವನ್ನು ಉದ್ದದಷ್ಟೇ ಅಗಲ ಮಾಡದಿರುತ್ತಿದ್ದರೇ? ಆಗಲಿ, ಇನ್ನಾದರೂ ಈ ವಿಷಯಕ್ಕೆ ಒಂದು ಅರ್ಜಿ ಹಾಕಬೇಕು" ಎಂದು ತನ್ನ ಪಾತ್ರವನ್ನು ಯಶಸ್ವಿಯಾಗಿ ಜರಗಿಸಬೇಕೆಂದು ನೆನಸಿದ ಸಂಗಣ್ಣನು ಒದರ ಹತ್ತಿ

ದನು. ದೂರದಲ್ಲಿ ಜನರು "ಭಲೇ, ಭೇಷ್" ಎಂದು ಹೊಗಳಹತ್ತಿದರು. ಸಂಗಣ್ಣನು ಈ ಹೊಗಳುವಿಕೆಯಿಂದ ಇನ್ನಷ್ಟು ಆನಂದಪಟ್ಟನು.

ಆ ಮೇಲೆ ಚರಂಡಿಯಿಂದ ಹೇಗಾದರೂ ಮೇಲೆ ಬಂದು ಮಾರ್ಗ ವೆಲ್ಲಾ ಸುತ್ತಾಡಿ ಸುತ್ತಾಡಿ, ಬಾಯಿಯಿಂದ ನೊರೆ ಕಾರುತ್ತಾ, ಏನೇನೋ ಹರಟುತ್ತಾ, ಸಂಗಣ್ಣನು ಹೇಗೂ ರಂಗನಂಗಡಿಗೆ ಬಂದು ತಲುಪಿದನು. ಆ ಮೇಲೆ ರಂಗನನ್ನು ಕರೆದು "ಥೂ! ಮಗನೆ, ಒಂದು ಕಟ್ಟು ಬೀಡಿ ಕೊಡುವಿಯೋ, ಹಲ್ಲು ತೆಗೆಯಲೋ?" ಎಂದು ದಸರಾ ಸಮಯದ ಹುಲಿಯಂತೆ ಕುಣಿಯತೊಡಗಿದನು. ರಂಗನು ಇವನ ಈ ಕಸರತ್ತನ್ನು ಕಂಡು, ದೂರದ ಮಾರಿ ದೂರವೇ ಹೋಗಲೆಂದು ಅವನಿಷ್ಟಪಟ್ಟುದನ್ನೆಲ್ಲಾ ಕೊಟ್ಟು, ಸಂಗಣ್ಣನನ್ನು ಬೇಗನೆ ಕಳುಹಿಸಿ ಬಿಟ್ಟನು.

ಈ 'ಕೇಸಿ'ನಲ್ಲಿ ವಿಜಯಿಯಾದೆನೆಂದು ಸಂಗಣ್ಣನು ಇನ್ನಷ್ಟು ಉಬ್ಬಿ, ಹಾದಿ ಹೋಕರನ್ನೆಲ್ಲಾ ಮಾತಾಡಿಸಲಾರಂಭಿಸಿದನು. ಈತನ ಮಾತಿನ ರೀತಿ ನೋಡಿ ಸಂಗಪ್ಪನ ತಮ್ಮನು, ತನ್ನಣ್ಣನೆಂದೇ ಗ್ರಹಿಸಿ ಮೋಸ ಹೋದನು. ಸಂಗಣ್ಣನ ಈ ಮಾನಗೇಡಿತನದ ಮಾತುಗಳನ್ನು ಕೇಳಿ ಮಾನವಂತರೆಲ್ಲಾ, ಅವನ ಯಾವ ಮಾತಿಗೂ ಉತ್ತರ ಕೊಡದೆ, ತಮ್ಮ ಪಾಡಿಗೆ ತಾವು ಹೊರಟು ಹೋದರು.

ಅಷ್ಟರಲ್ಲಿ ಸಂಗಣ್ಣನು ಯಾರ ನಮೂನೆ "ಏಕ್ಟ್" ಮಾಡು ತ್ತಿದ್ದನೋ, ಆ ಮಹಾರಾಯನೇ ಈಗ ಅವನಿಗೆ ಗಂಟು ಬಿದ್ದನು. ತನ್ನಂತೆ ಅಡಿಗಣ್ಣಿನಿಂದ ನೋಡುವ, ಬಾಯಲ್ಲಿ ನೊರೆಕಾರುವ, ಎಡ ಬಲಕ್ಕೆ ಬಾಗಿ ಬಾಗಿ ನಡೆವ ಸಂಗಣ್ಣನನ್ನು ಕಂಡು ಸಂಗಪ್ಪನಿಗೆ ಸಿಟ್ಟು ಬಂತು. "ಛೀ ನಾಯಿ, ನನ್ನನ್ನು ಚಾಳಿಸಲು ಹೊರಟಿರು ವೆಯಾ? ನಿನ್ನ ನೂರು ವರ್ಷಗಳನ್ನು ಈಗಲೇ ಪೂರ್ತಿಮಾಡಿ ಬಿಡು ತ್ತೇನೆ" ಎಂದು ಹೂಂಕರಿಸಿದನು.

ಷುರೆಯ ಅಮಲು ತಲೆಗೇರಿ ಧೃತಿಗೆಟ್ಟ ಸಂಗಣ್ಣನು ಈ ಮಾತನ್ನು ಸಹಿಸದಾದನು. ಅವನು ಹಲ್ಲು ಕಡಿಯುತ್ತಾ "ಏ ನಂಗಪ್ಪಾ, ಬಗುಳ ಬೇಡ, ಕುಸ್ತಿಗೆ ಬರುವಿಯಾದರೆ ಬಾ" ಎಂದು ಭುಜ ತಟ್ಟುತ್ತಾ, ಹೆಂಡ ಕುಡಿದು ಮತಿಗೆಟ್ಟ ಸಂಗಣ್ಣನು ನುಡಿದನು.

ನಂಗಪ್ಪನ ತಾಳ್ಮೆಯು ಮಾಯವಾಯಿತು. "ನನ್ನಂತಹ ಫಕ್ಕಾ ಜನರನ್ನೂ ಚಾಳಿಸಲು ಹೊರಟುದಲ್ಲದೆ, ಈಗ ಹರಟಲೂ ಪ್ರಾರಂಭಿಸಿದೆಯಾ?" ಎಂದವನೇ ಸಂಗಣ್ಣನ ಕೆನ್ನೆಗೆ ಪಟಪಟನೆ ನಾಲ್ಕೇಟು ಕೊಟ್ಟು ಬಿಟ್ಟನು.

ಈಗ ಮಾತ್ರ ಸಂಗಣ್ಣನಿಗೆ ತಲೆಗೇರಿದ ಸುರೆಯೆಲ್ಲಾ, ನಂಗಪ್ಪನ ಪೆಟ್ಟಿನಿಂದ ಸಂಪೂರ್ಣ ಇಳಿದು ಬಿಟ್ಟಿತು. ನಂಗಪ್ಪನು ಹೊಡೆದ ಪೆಟ್ಟಿನಿಂದಾಗಿ ಸಂಗಣ್ಣನು ನಡುಗಲು ಪ್ರಾರಂಭಿಸಿದ್ದಲ್ಲದೆ ಆತನ ಕೆನ್ನೆಯು ಬಿಸ್ಕೂಟು ಅಂಬಡೆಯಂತೆ ಬಾತುಕೊಂಡು, ಎರಡು ಹಲ್ಲುಗಳು ಅವನಿಗಿಂತಲೂ ಹೆಚ್ಚಾಗಿ ನಡುಗತೊಡಗಿದವು.

"ಅಬ್ಬಾ, ಇನ್ನೊಬ್ಬರಿಗೆ ಚಾಳಿಸುವ ಕೆಲಸವು ನನಗೇಕೆ ಬೇಕು? ಎಲ್ಲರಿಂದಲೂ ಹೊಗಳಿಸಿಕೊಳ್ಳಬೇಕೆಂದು ಏಕೆ ಯೋಚಿಸಿದೆ? ಇಂದಿಗೆ ಒಂದು ಪಾಠ ಕಲಿತಂತಾಯಿತು" ಎಂದು ಕೆನ್ನೆ ಸವರುತ್ತಾ ಸಂಗಣ್ಣನು ಅತೀ ಕಷ್ಟದಿಂದ ನುಡಿದನು.



